155

KARNATAK GRANTHALA
No ೮೫೩೮೩
DHARWAD

ವೀರಭಾರತ ಗ್ರಂಥಮಾಲೆ: ೩

# ಹಂಬಲ

( ಕಥಾ ಸಂಕಲನ)




೮೫೩೮೩

ಬರೆದವರು :

ಶ್ರೀ. ಕೃಷ್ಣಮೂರ್ತಿ ಕಿತ್ತೂರ.

ಬೆಳಗಾವಿ.

೧೯೫೧

# ಪ ರಿ ವಿ ಡಿ .

C3016 CR

ಮುನ್ನುಡಿ — ಶ್ರೀ. ಬೆಟಗೇರಿ ಕೃಷ್ಣಶರ್ಮ.

ಹರಕೆ — ಪ್ರೊ. ವ್ಹಿ. ಜಿ. ಕುಲಕರ್ಣಿ.




# ಮುನ್ನುಡಿ.

ಸಣ್ಣ ಕತೆಗಳನ್ನು ಬರೆಯುವುದೆಂದರೆ, ಸಾಹಿತ್ಯ ನಿರ್ಮಾಣದಲ್ಲಿಯ ತೀರ ಸುಲಭ ಕಾರ್ಯವೆಂದು ಬಹಳ ಜನರ ಭಾವನೆಯಾಗಿದೆ. ವಾಸ್ತವ ಸಾಹಿತ್ಯವೇ ಬೇಕೆಂಬ ಕೂಗಿನ ಇಂದಿನ ಕಾಲದಲ್ಲಂತೂ—ಯಾವ ಭಾಷೆಯ ಸಾಹಿತ್ಯದಲ್ಲಿಯೂ—ಸಣ್ಣ ಕತೆಗಳ ನಿರ್ಮಿತಿಯ ಪ್ರಮಾಣವೆ ಹೆಚ್ಚಾಗಿ ಕಾಣುತ್ತದೆ. ಸರಿ! ಸಣ್ಣ ಕತೆಗಳನ್ನು ಬರೆಯುವುದು ಸುಲಭವೆ. ಏಕೆಂದರೆ: ಮಾನವ ಜೀವನದ ಯಾವುದೇ ಭಾಗವೂ ಸಣ್ಣ ಕತೆಗೆ ವಸ್ತುವನ್ನು ಒದಗಿಸಿಕೊಡಬಲ್ಲದು; ಯಾವುದೇ ವ್ಯಕ್ತಿಯೂ ಪಾತ್ರವಾಗಿ ನಿಲ್ಲಬಲ್ಲದು. ಆದುದರಿಂದಲೆ ಲೋಕವನ್ನು ಕಣ್ಣಿಟ್ಟು ನೋಡುವವರಿಗೆ, ಕತೆಗೆ ಬೇಕಾದ ಮೂಲ ಧನ ಸಹಜವಾಗಿ ಸಿಕ್ಕುತ್ತಿರುವುದು. ಆದರೆ ಕೇವಲ ಕಂಕಾಲ ರೂಪದಲ್ಲಿ ಸಿಕ್ಕುವ ಈ ಮೂಲ ಧನದಲ್ಲಿ ಮಾಂಸವನ್ನು ತುಂಬಿ, ಚರ್ಮವನ್ನು ಹೊದಿಸಿ, ಲಾವಣ್ಯವನ್ನು ಒಂದಿಸಿ, ಸೌಂದರ್ಯ ರೇಷೆಗಳನ್ನೆಳೆದು ಕಲಾಕೃತಿಯನ್ನಾಗಿಸುವ ಸಾಮರ್ಥ್ಯ ಬಹಳ ಜನರಲ್ಲಿ ಇರುವುದಿಲ್ಲ. ಅದಕ್ಕೆ ಮೊದಲನೆಯದಾಗಿ ಬೇಕು ಮೂಲಾನ್ವೇಷಕ ದೃಷ್ಟಿ. ಆ ಮೇಲೆ ಬೇಕು........, ಸತ್ಯಾಸತ್ಯಗಳನ್ನು ಆವಿಷ್ಕರಿಸುವಂತಹ ಬುದ್ಧಿ; ಕಂಡ ಸತ್ಯವನ್ನು ರಸವನ್ನಾಗಿಸುವ ಕಲ್ಪಕತೆ; ಹೃದಯದಲ್ಲಿ ಅನುಭವಿಸಿದ ರಸವನ್ನು ಮಾತಿನಲ್ಲಿ ಮೂಡಿಸಿ ತೋರಿಸುವಂತಹ ಭಾಷಾಸಿದ್ಧಿ. ಇವೆಲ್ಲ ಗುಣಗಳಿಂದ ಕೂಡಿದವನು, ಒಳ್ಳೆಯ ಕತೆಗಾರನೆಂದು ಹೆಸರನ್ನು ಪಡೆಯಬಲ್ಲ. ಇವುಗಳಲ್ಲಿಯ ಒಂದೊಂದೇ ಗುಣಗಳ ಕೊರತೆಯಾಗುತ್ತ ಹೋದಂತೆ, ಆ ಆ ಕತೆಗಾರನ ಕಲೆಯು ನೆಲೆ ಕೆಳಕೆಳಗೆ ಇಳಿಯುತ್ತ ಹೋಗುತ್ತದೆ. ಹೊಸ ಕತೆಗಾರರೆಲ್ಲ ಈ ಸಾಹಿತ್ಯಿಕ ತತ್ತ್ವದ ತಿಳುವಳಿಕೆಯಿಂದ ಬರೆಯಲು ತೊಡಗಿದರೆ, ಅವರ ಕೃತಿಗಳು ಸಹೃದಯರ ಮನಸ್ಸನ್ನು ಮೆಚ್ಚಿಸದೆ ಇರವು.

ಈ ಸಂಕಲನದ ಕತೆಗಾರರಾದ ಶ್ರೀ. ಕೃಷ್ಣಮೂರ್ತಿ ಕಿತ್ತೂರ ಅವರು ತರುಣ ಕತೆಗಾರರು. ಕನ್ನಡ ವಾಚಕಲೋಕಕ್ಕೆ ಹೊಸಬರು. ಆದುದರಿಂದಲೆ, ಕನ್ನಡ ವಾಚಕರಿಗೆ ಹಳಬನಾಗಿರುವ ನಾನು ಮುನ್ನುಡಿ ಬರೆದು ಪರಿಚಯ ಮಾಡಿಕೊಡಬೇಕೆಂದು, ಶ್ರೀ. ಕೃಷ್ಣಮೂರ್ತಿಯವರು ನನ್ನ ಮುನ್ನುಡಿಯನ್ನು ಅಪೇಕ್ಷಿಸಿದರೆಂದು ನಾನು ಭಾವಿಸಿದ್ದೇನೆ. ಅವರ ವಿಷಯದಲ್ಲಿರುವ ನನ್ನ ವಿಶ್ವಾಸ, ಈ ಸಂಕಲನಕ್ಕೆ ಮುನ್ನುಡಿ ಬರೆಯಲಿಕ್ಕೆ ನನ್ನನ್ನು ಒಪ್ಪಿಸಿತು.

ಶ್ರೀ. ಕೃಷ್ಣಮೂರ್ತಿಯವರು ಬೆಳಗಾವಿಯ ಮಾಧ್ಯಮಿಕ ಶಾಲೆಯೊಂದರಲ್ಲಿ ಅಧ್ಯಾಪಕರಾಗಿ ಕಲಿಸುತ್ತಲೂ ಇದ್ದಾರೆ; ಲಿಂಗರಾಜ ಕಾಲೇಜಿನಲ್ಲಿ ಬಿ. ಎ. ಪದವಿಗಾಗಿ ಕಲಿಯುತ್ತಲೂ ಇದ್ದಾರೆ. ಸಾಹಿತ್ಯಾಭ್ಯಾಸದಲ್ಲಿ ತುಂಬ ಆಸಕ್ತಿಯಿವರಿಗೆ. ಸ್ವತಃ ಸಾಹಿತ್ಯಿಕರಾಗಬೇಕೆಂಬ ಬಯಕೆಯಿಂದ, ನಿರ್ಮಾಣಕ್ಷೇತ್ರದಲ್ಲಿ ಇದೀಗ ಅಡಿಯಿರಿಸಿದ್ದಾರೆ.

ಇಲ್ಲಿಯ ಏಳೂ ಕತೆಗಳಲ್ಲಿಯ ವಸ್ತುವೈವಿಧ್ಯವನ್ನು ನೋಡಿದವರಿಗೆ, ಕತೆಗಾರನಿಗೆ ಮೊದಲನೆಯದಾಗಿ ಬೇಕಾದ ಮೂಲಾನ್ವೇಷಕ-ದೃಷ್ಟಿ ಇವರಿಗಿದೆಯೆಂದು ಚೆನ್ನಾಗಿ ವ್ಯಕ್ತವಾಗುವುದು. 'ಹಂಬಲ' 'ಪ್ರೊ. ರಾವ್' 'ಮೂರು ಚಿತ್ರಗಳು' ಇವು ಬಡತನದ ದುರ್ಧರತೆಯನ್ನು ಚಿತ್ರಿಸಲು ಹವಣಿಸಿದುವಾದರೆ, 'ರಾಮೂನ ಬಿ. ಎ.' ಓದಿ ಮರುಳಾದ ಕೂಸಿಭಟ್ಟತನವನ್ನು ಅಣಕಿಸಲು ಮುಂದೆ ಬಂದುದು. 'ತ್ಯಾಗ' ಕತೆಯು ಹೆಣ್ಣಿನ ಮದುವೆಯ ತೊಡಕನ್ನು ರೇಖಿಸುವುದಾದರೆ, 'ವಯಸ್ಸೆಷ್ಟು' 'ರಂಗನ ಮಂಗತನ' ಎಂಬ ಕಿರುಗತೆಗಳು ಮಾನವನ ಲೋಭ, ಕಾಮುಕ ಮನೋವೃತ್ತಿಗಳನ್ನು ಮೂದಲಿಸಲು ನಿರ್ಮಾಣವಾಗಿರುವುವು.

ಕಥನ ತಂತ್ರದ ನಾವೀನ್ಯವು ಸಣ್ಣ ಕತೆಗಳನ್ನು ಕಳೆಗೊಳಿಸುವುದೆಂಬ ಮನವರಿಕೆ, ಕತೆಗಾರರಿಗೆ ಸಾಕಷ್ಟಿದೆಯೆಂಬುದು—ಇಲ್ಲಿಯ

ಒಂದೊಂದು ಕತೆಗೂ ಬಳಸಿದ ಬೇರೆ ಬೇರೆ ತಂತ್ರಗಳನ್ನು ನೋಡಿದರೆ— ಎಲ್ಲರಿಗೂ ಕಂಡುಬರುವ ಮಾತಾಗಿದೆ.

'ಹಂಬಲ' ಕತೆಯಲ್ಲಿರುವ ನಾಯಕನಾದ ಮೂರ್ತಿಯ ಸುಶಿಕ್ಷಿತ ಜೀವನವೂ, 'ಮೂರು ಚಿತ್ರಗಳು' ಎಂಬುದರಲ್ಲಿಯ ಹೈದರಾಬಾದ್ ನಿರ್ವಾಸಿತನ ಅಶಿಕ್ಷಿತ ಜೀವನವೂ ದಾರಿದ್ರ್ಯದ ದುರ್ಲೀಲೆಯಿಂದ ಹೇಗೆ ದುರಂತರದಲ್ಲಿ ಪರಿಣಮಿಸಿದುವೆಂಬುದರ ಚಿತ್ರ, ಬಹು ಜನರ ಕರುಳನ್ನು ಕೊರೆಯಬಲ್ಲುವು. ಪ್ರೊಫೆಸರ ರಾವ್ ಅವರಲ್ಲಿ ಅರಳಿದ ಮಾನವತೆ ಭಾವ ಪೂರ್ಣವಾಗಿದೆ. ಪ್ರೊಫೆಸರರ ಹೆಂಡತಿ, ನರ್ಸ್ ಸುಮಿತ್ರಮ್ಮ, ಇವರ ಪಾತ್ರ ಪರಿಪೋಷಣೆಯಲ್ಲಿ ಕತೆಗಾರರ ಕೌಶಲ ಮಿನುಗುತ್ತದೆ.

ಶ್ರೀ. ಕೃಷ್ಣಮೂರ್ತಿಯವರ ಜೀವನದ ಅನುಭವ ಬೆಳೆಯುತ್ತ ಹೋದಂತೆ, ಅವರಲ್ಲಿಯ ಕಥನಕಲೆಯೂ ಬೆಳೆಯಬಹುದೆಂಬ ನಂಬುಗೆ, ಈ ಕತೆಗಳನ್ನು ಓದಿದವರಲ್ಲಿ ಮೂಡದೆ ಇರದು. ಈ ತರುಣ ಕತೆಗಾರರಿಗೆ ಕನ್ನಡ ರಸಿಕರಿಂದ ಸಾಕಷ್ಟು ಪ್ರೋತ್ಸಾಹ ದೊರೆಯಲಿ ! ಇವರಿಂದ ಕನ್ನಡ ಕಥಾಸಾಹಿತ್ಯಕ್ಕೆ ಒಳ್ಳೆಯ ಕಾಣಿಕೆ ಸಲ್ಲಲಿ !

'ಜಯಂತಿ' ಕಾರ್ಯಾಲಯ,<br>ಧಾರವಾಡ.<br>ತಾ. ೫—೨—೧೯೫೧.

ಬೆಟಗೇರಿ ಕೃಷ್ಣಶರ್ಮ.

# ಹರಕೆ.

ನನ್ನ ಕಿರಿಯ ಮಿತ್ರರೂ ವಿದ್ಯಾರ್ಥಿಗಳೂ ಆದ ಶ್ರೀ. ಕೃಷ್ಣಮೂರ್ತಿ ಕಿತ್ತೂರ ಅವರು ತಮ್ಮ ಈ ಮೊದಲನೆಯ ಪುಸ್ತಕಕ್ಕೆ ಹರಕೆಯ ನಾಲ್ಕು ಮಾತುಗಳನ್ನು ಹೇಳಬೇಕೆಂದು ಕೇಳಿಕೊಂಡಿದ್ದಾರೆ. ನಿಜವಾಗಿ ನೋಡಿದರೆ ಇಂತಹ ಹರಕೆಯ ಅವಶ್ಯಕತೆಯೇನೂ ಇಲ್ಲ. ನನ್ನ ಶುಭಾಶಯಗಳು ಯಾವಾಗಲಾದರೂ ಅವರ ಕಾರ್ಯಕ್ಕೆ ಇದ್ದೇ ಇವೆ. ಅಲ್ಲದೆ ನನ್ನ ಹಿರಿಯ ಮಿತ್ರರಾದ ಶ್ರೀ. ಬೆಟಗೇರಿ ಕೃಷ್ಣಶರ್ಮರು ಈ ಚಿಕ್ಕ ಗ್ರಂಥಕ್ಕೆ ಮುನ್ನುಡಿ ಬರೆದದ್ದರಿಂದ, ಈ ತರುಣ ಲೇಖಕನ ಅಲ್ಪ ಪರಿಚಯವೂ ಗ್ರಂಥದ ಲಘು ವಿಮರ್ಶೆಯೂ ಕನ್ನಡದ ಜನತೆಗೆ ಆಗಿದೆ. ಈಗ ನಾನು ಹೇಳಬೇಕಾದದು ಕೇವಲ ಶುಭೇಚ್ಛೆಯ ಎರಡು ಮಾತು.

ಶ್ರೀ. ಕಿತ್ತೂರವರು ಕನ್ನಡ ಸಾಹಿತ್ಯದಲ್ಲಿ ಆಸ್ಥೆವಹಿಸಿ ಅಭ್ಯಾಸ ಮಾಡತಕ್ಕವರು; ದುಡಿಯತಕ್ಕವರು. ಈಗಾಗಲೇ ಅವರು ಕೆಲವೊಂದು ಕತೆಗಳನ್ನು ಬರೆದು ಪ್ರಕಟಿಸಿದ್ದಾರೆ. ಪ್ರಕಟವಾದ ಕೆಲವು ಕತೆಗಳನ್ನೂ ಇನ್ನೂ ಪ್ರಕಟವಾಗದ ಕೆಲವು ಕತೆಗಳನ್ನೂ ಕೂಡಿಸಿ ಈ ಗ್ರಂಥದಲ್ಲಿ ಪ್ರಸಿದ್ಧಿಸಲಾಗಿದೆ. ಈ ಕತೆಗಳಲ್ಲಿ ಹೆಚ್ಚಾಗಿ ಶೋಕದ ಸನ್ನಿವೇಶಗಳೇ ಇವೆ. ಇದು ಈ ಲೇಖಕನ ಮನೋಧರ್ಮವೋ ಇಲ್ಲವೆ ಇಂದಿನ ಕಾಲಧರ್ಮವೋ ಆಗಿರಬಹುದು. ಒಬ್ಬ ಪ್ರಸಿದ್ಧ ಆಂಗ್ಲ ಲೇಖಕನು ಹೇಳುವಂತೆ, "Art must be the mouth-piece of misery; for misery is the key-note of modern life." ಇಂದಿನ ಜೀವನದಲ್ಲಿ ಶೋಕವೇ ಎಲ್ಲಾ ಸ್ಥಾನವನ್ನು ಆಕ್ರಮಿಸಿದಂತಿದೆ. ಎಂದಮೇಲೆ ಲೇಖಕನು ತನ್ನ ಕಾಲದ ವಾತಾವರಣವನ್ನು ಚಿತ್ರಿಸ ಹೊರಟರೆ ಆ ಕಾಲದ ಮುಖ್ಯವಾದ ಭಾವವೇ ಕೃತಿಯಲ್ಲಿ ಒಡಮೂಡುವುದು ಸಹಜ.

ಈ ತರುಣ ಲೇಖಕರು ಇದೀಗ ಸಾಹಿತ್ಯ ಪ್ರಪಂಚದಲ್ಲಿ ಕಾಲಿಟಿದ್ದಾರೆ. ಅವರ ಈ ಪ್ರಥಮ ಗ್ರಂಥವು ಇನ್ನು ಮುಂದೆ ಅವರು ಮಾಡಬಹುದಾದ ಸಾಹಿತ್ಯಸೇವೆಗೆ ಪೂರ್ವಸೂಚನೆಯಂತಿದೆ. ಅವರಿಂದ ಇನ್ನೂ ಅನೇಕ ವಿಧವಾದ ಸಾಹಿತ್ಯಸೇವೆ ಘಟಿಸಲಿ; ಬೇರೆ ಬೇರೆ ಭಾವಗಳೂ, ಮಾನವನ ಮನಸ್ಸಿನ ವೈಚಿತ್ರ್ಯಗಳೂ ಅವರ ಕೃತಿಯಲ್ಲಿ ಒಡಮೂಡಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ; ಹರಕೆಗಳನ್ನು ಸಲ್ಲಿಸುತ್ತೇನೆ.

ಪ್ರೊ. ವ್ಹಿ. ಜಿ. ಕುಲಕರ್ಣಿ,
ಕನ್ನಡದ ಪ್ರಮುಖ ಪ್ರಾಧ್ಯಾಪಕರು,
ಲಿಂಗರಾಜ ಕಾಲೇಜು; ಬೆಳಗಾವಿ.

## ವಿಜ್ಞಾಪನೆ.

“ನಡೆವರೆಡಹದೆ ಕುಳಿತರೆಡಹುವರೆ......”

—ರಾಘವಾಂಕ.

ಸಾಹಿತ್ಯ ಪ್ರಪಂಚದಲ್ಲಿ ನಾನಿನ್ನೂ ಹೊಸಬ; ತೊದಲ್‌ನುಡಿದು ಅಂಬೆಗಾಲಿಕ್ಕುವ ಮಗು. ಆ ತೊದಲ್‌ನುಡಿಯೇ ಸಹೃದಯರಿಗೆ ಆನಂದವನ್ನುಂಟುಮಾಡಿದರೆ, ಅದು ನನಗೆ ಅತ್ಯಾನಂದವೆಂದು ಬೇರೆ ಹೇಳಬೇಕೇ?

‘ ಹಂಬಲ ’ ನನ್ನ ಮೊದಲ ಪುಸ್ತಕ. ನನ್ನ ಈ ವಿದ್ಯಾರ್ಥಿ ಜೀವನದಲ್ಲಿ ನಾನು ಆಗಾಗ ಬರೆದ ಕತೆಗಳಲ್ಲಿಯ ಕೆಲವು ಕತೆಗಳನ್ನು ಇಲ್ಲಿ ಪ್ರಕಟಿಸಲಾಗಿದೆ. ರಸಿಕರೂ ಸಹೃದಯಿಗಳೂ ಆದ ಓದುಗರು ಮತ್ತು ವಿಮರ್ಶಕರು ಈ ನನ್ನ ಕಿರು ಹೊತ್ತಗೆಯ ವಿಷಯವಾಗಿ ತಮ್ಮ ಸದಭಿಪ್ರಾಯಗಳನ್ನು ವ್ಯಕ್ತಪಡಿಸಲೆಂದು ಕೇಳಿಕೊಳ್ಳುವೆನು.

ಈ ಚಿಕ್ಕ ಪುಸ್ತಕಕ್ಕೆ ಮುನ್ನುಡಿ ಬರೆದು ಕೊಡಬೇಕೆಂದು ಕೇಳಿದ ಕೂಡಲೇ ಸಂತೋಷದಿಂದ ಒಪ್ಪಿ, ನನ್ನಲ್ಲಿ ವಿಶ್ವಾಸ–ವಾತ್ಸಲ್ಯಗಳನ್ನಿಟ್ಟು, ಮನಂಬುಗುವ ರೀತಿಯಲ್ಲಿ ಮುನ್ನುಡಿ ಬರೆದುಕೊಟ್ಟ' ಹಿರಿಯರಾದ ಶ್ರೀ. ಬೆಟಗೇರಿ ಕೃಷ್ಣಶರ್ಮರಿಗೆ ನಾನೆಂದಿಗೂ ಋಣಿಯಾಗಿದ್ದೇನೆ. ಅದ ರಂತೆ ಯಾವಾಗಲೂ ನನಗಾಗಿ ಶುಭಾಶಯಗಳನ್ನು ಕೋರುವ ನನ್ನ ಮಾನ್ಯ ಗುರುಗಳಾದ ಪ್ರೊ. ವ್ಹಿ. ಜೀ ಕುಲಕರ್ಣಿಯವರು ನನ್ನ ಮೇಲಿನ ಮಮತೆಯಿಂದ ಹರಕೆಗಳನ್ನು ಸಲ್ಲಿಸಿದ್ದಾರೆ. ಅವರಿಗೆ ನಾನು ಆಭಾರಿ ಯಾಗಿದ್ದೇನೆಂದು ಬಾಯಿಮಾತಿನಿಂದ ಹೇಳಬೇಕೇ ? ಈ ಸಂಕಲನದಲ್ಲಿಯ ಕೆಲವು ಕತೆಗಳು ಈಗಾಗಲೇ 'ಜಯಂತಿ' 'ಅಂತರಂಗ' 'ಉಷಾ' 'ಸಂದೇಶ' ಮುಂತಾದ ಪತ್ರಿಕೆಗಳಲ್ಲಿ ಅಚ್ಚಾಗಿವೆ. ಆಯಾ ಸಂಪಾದ ಕರಿಗೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ. ಅಲ್ಲದೆ ಈ ಪುಸ್ತಕವನ್ನು ಮುದ್ರಿಸಿ, ಪ್ರಕಟಿಸಿದ ಶ್ರೀ. ಎ. ಪಿ. ಚೌಗುಲೆ ಅವರ ಉಪಕಾರವನ್ನೂ ಮರೆಯಲಾರೆ.

ಕೊನೆಯದಾಗಿ ನನಗೆ ಬರೆಯಲು ಆಗಾಗ ಸ್ಫೂರ್ತಿಯನ್ನಿತ್ತು, ಪ್ರಕಟಿಸಲು ಪ್ರೋತ್ಸಾಹಿಸಿದ ನನ್ನ ಮಿತ್ರರನ್ನೂ, 'ನನ್ನವ'ರನ್ನೂ ಸ್ಮರಿಸದಿರಲಾರೆ.

**ಬಿ. ಕೆ. ಮಾಡೆಲ ಹಾಯಸ್ಕೂಲ,**
**ಬೆಳಗಾವಿ.**
ತಾ. ೧೦—೨—೧೯೫೧.

**ಕೃಷ್ಣಮೂರ್ತಿ ಕಿತ್ತೂರ.**

# ಅರ್ಪಣ.

ಬಾಡಿಹೋಗಬಹುದಾದ ನನ್ನ ಬಾಳಸಸಿಗೆ

ಬೆಳೆಯಲಾಸ್ಪದ ಮಾಡಿಕೊಟ್ಟು

ಅದು ಚಿಗುರೊಡೆಯುವ ಮುನ್ನವೆ ಕಣ್ಮರೆಯಾದ

ನನ್ನ ತಾಯ-ಸೋದರ

**ದಿ. ರಾಘವೇಂದ್ರ ಗೋವಿಂದ ನಾಯಿಕ,**

**ಶಹಾಪೂರ.**

ಅವರ ನೆನಹಿಗೆ ——

——ಲೇಖಕ.

# ಪ್ರಕಾಶಕರಿಂದ

' ವೀರ-ಭಾರತ ಗ್ರಂಥಮಾಲೆ 'ಯ ಮೂರನೆಯ ಕುಸುಮವಾಗಿ ' ಹಂಬಲ ' ಎಂಬ ಕಥಾಸಂಕಲನವನ್ನು ಓದುಗರ ಮುಂದಿಡಲು ನಮಗೆ ಅತ್ಯಾನಂದವಾಗುತ್ತಲಿದೆ. ಈ ಸಂಕಲನದ ಲೇಖಕರಾದ ಶ್ರೀ. ಕೃಷ್ಣ ಮೂರ್ತಿ ಕಿತ್ತೂರ ಅವರಿಗೆ ನಾವು ತುಂಬಾ ಉಪಕೃತರಾಗಿರುವೆವು. ಅದರಂತೆ ಮುನ್ನುಡಿಯನ್ನು, ಹರಕೆಯನ್ನು ಬರೆದುಕೊಟ್ಟ ಶ್ರೀ. ಬೆಟಗೇರಿ ಕೃಷ್ಣಶರ್ಮ ಮತ್ತು ಪ್ರೊ. ವ್ಹಿ. ಜಿ. ಕುಲಕರ್ಣಿ ಅವರ ಉಪಕಾರವನ್ನೂ ಮರೆಯಲಾರೆವು.

ಈ ವರ್ಷದ ಉಳಿದ ಮೂರು ಪುಸ್ತಕಗಳನ್ನು ಆದಷ್ಟು ಬೇಗನೇ ಸಲ್ಲಿಸುವೆವು. ನಾಲ್ಕನೆಯ ಪುಸ್ತಕವಾದ " ಕಾಂಗ್ರೆಸದ ಇತಿಹಾಸ " ವು ಅಚ್ಚಿನಲ್ಲಿದೆ.

ಕನ್ನಡ ವಾಚಕರು ನಮ್ಮ ಈ ಕನ್ನಡದ ಸೇವೆಯ ಕಾರ್ಯದಲ್ಲಿ ನೆರ ವಾಗಬೇಕೆಂದು ಕೇಳಿಕೊಳ್ಳುವೆವು. ಪುಸ್ತಕಗಳನ್ನು ಕೊಂಡು ಓದುವುದು ಕನ್ನಡದ ಜನತೆಗೆ ತುಸು ಅಪರಿಚಿತವೆಂದು ಬಹು ಜನರ ಅಭಿಪ್ರಾಯ. ಆದರೆ ನಮ್ಮ ವಾಚಕರು ಈ ಮಾತನ್ನು ಸುಳ್ಳುಮಾಡಿ ತೋರಿಸುವರೆಂದು ನಮಗೆ ಬಲವಾದ ಆಶೆಯಿದೆ.

ಎ. ಪಿ. ಚೌಗುಲೆ,
ಅಜಿತ ಏಜನ್ಸಿ, ಬೆಳಗಾವಿ.

# ಹಂಬಲ

ಹಾಸ್ಪಿಟಲಿನಲ್ಲಿಯ ಗಡಿಯಾರ ಮುಂಜಾನೆಯ ೯ರ ಗಂಟೆಯನ್ನು ಬಾರಿಸಲಿಕ್ಕೂ, ನರ್ಸು ಸುಮಿತ್ರಮ್ಮ ಕೋಣೆಯಲ್ಲಿ ಕಾಲಿಡಲಿಕ್ಕೂ ಮತ್ತು ಮೂರ್ತಿ ಕಂಣು ತೆರೆಯಲಿಕ್ಕೂ ಸರಿಹೋಯ್ತು. ಕಣ್ಣುಜ್ಜಿ ಕೊಳ್ಳುತ್ತಿದ್ದ ಮೂರ್ತಿಯನ್ನು ಕಂಡು ಸುಮಿತ್ರಮ್ಮ, “ ಗುಡ್ ಮಾರ್ನಿಂಗ್ ಮೂರ್ತಿರಾಯರೇ ”, ಎಂದಳು. “ ಗುಡ್ ಮಾರ್ನಿಂಗ್ ಎಂದು ಪ್ರತಿ ಹೇಳಿ ಮೂರ್ತಿ ಅವಳನ್ನು ಸ್ವಾಗತಿಸಿದ.

“ ಇದೇನು ಇಷ್ಟು ವೇಳೆಯ ವರೆಗೆ ಮಲಗಿಕೊಂಡು ಬಿಟ್ಟಿದ್ದೀರಿ! ರಾತ್ರಿ ಬೇಗ ನಿದ್ರೆ ಬರಲಿಲ್ಲವೇ ? ” ತನ್ನ ವೃತ್ತಿಗನುಗುಣವಾಗಿ ಕೇಳಿದಳು ಸುಮಿತ್ರಮ್ಮ.

“ ಇಲ್ಲ........ಯಾವುದೊ ಪುಸ್ತಕ ಓದುತ್ತಿದ್ದೆ. ಆ ಮೇಲೆ ಏನೋ ತುಸು ಬರೆಯುತ್ತಿದ್ದೆ. ಬರೆಯುವದು ಬೇಗ ಮುಗಿದಿತ್ತಾದರೂ ನಿದ್ರೆ ಮಾತ್ರ ಅದೇಕೋ ಬೇಗ ಬರಲಿಲ್ಲ. ಅದೆಷ್ಟೋ ವೇಳೆಯ ವರೆಗೆ ಹಾಗೇ ಹಾಸುಗೆಯಲ್ಲ ಉರುಳಾಡುತ್ತಿದ್ದೆ. ”

“ ನೀವು ರಾತ್ರಿ ಓದುವದಾಗಲಿ, ಬರೆಯುವದಾಗಲಿ ಮಾಡತಕ್ಕದ್ದಲ್ಲವೆಂದು ನಾನು ನಿಮಗೆ ಎಷ್ಟು ಸಲ ಹೇಳಿದರೂ ನೀವು ಕೇಳುವದೇ ಇಲ್ಲವಲ್ಲ! ನಿಮಗೆ ಮೊದಲೇ ನಿದ್ರೆ ಕಡಿಮೆ. ಅದರಲ್ಲಿ ಓದುತ್ತ ಕುಳಿತರಂತೂ ಮುಗಿದೇ ಹೋಯಿತು. ಬರಬೇಕಾದ ನಿದ್ರೆಯೂ ಓದುವ ಭರದಲ್ಲಿ ಬಾರದೆ ಹೋಗಬಹುದು. ”

“ ಆದರೆ ಸುಮಿತ್ರಮ್ಮಾ, ನಿದ್ರೆಯಿಲ್ಲದೆ ಹಾಗೇ ಹಾಸುಗೆಯಲ್ಲಿ ಬಿದ್ದುಕೊಂಡಿರುವಂಥ ಶಿಕ್ಷೆ ಇನ್ನೊಂದಿಲ್ಲವೆಂದು ನನ್ನ ಅನುಭವ. ”

“ ಇರಬಹುದು. ಆದರೆ ನಿಮಗೆ ನಿದ್ರೆ ಇಲ್ಲದೆ ಹೋದರೆ ಬಹು ಅಪಾಯಕರ. ಮೊದಲೇ ನಿಃಶಕ್ತಿ ಬೆಳೆದುಬಂದಿದೆ........ಆ ಮೇಲೆ ತ್ರಾಸಾದೀತು ! ”

“ ತ್ರಾಸು ಯಾತರದು ಸಾವಿತ್ರಮ್ಮಾ? ” ಮೂರ್ತಿಯ ಮೊಗದಲ್ಲಿ ನಿರಾಶಾಮಯ ನಗುವೊಂದು ಕಾಣಿಸಿಕೊಂಡಿತು. “ ಈ ದೇಹ ತ್ರಾಸು ಸಹಿಸಿ ಸಹಿಸಿ ಸಾಕಷ್ಟು ಬೇಸತ್ತಿದೆ. ಅದಕ್ಕೀಗ ಬೇಕಾದುದು ಸಂಪೂರ್ಣ ಶಾಂತಿಯೊಂದೇ. ಈ ನಿದ್ರೆಯ ಶಾಂತಿ ಸಾಲದು. ”

“ ಏನದು ಮೂರ್ತಿರಾಯರೇ, ಇಂದು ಬೆಳಗಿನಲ್ಲಿ ಹೀಗೇಕೆ ಮಾತನಾಡುತ್ತಿದ್ದೀರಿ? ನಿಮ್ಮ ಪ್ರಕೃತಿ ಈಗ ಮೊದಲಿಗಿಂತಲೂ ಅದೆಷ್ಟೋ ಸುಧಾರಿಸಿದೆ. ನೀವೇ ನೋಡಿರಿ. ನಿಮಗೆ ಮೊದಲು ಒಂದು ಪತ್ರ ಬರೆಯುವಷ್ಟು ಕೂಡ ತ್ರಾಣವಿರಲಿಲ್ಲ. ಆದರೆ ನಿನ್ನೆ ರಾತ್ರಿ ಅದೇನೋ ಬರೆದೆ ಎಂದು ಇದೀಗ ನೀವೇ ಹೇಳಲಿಲ್ಲವೇ?”

“ ಸುಮಿತ್ರಮ್ಮಾ, ಅದು ನನ್ನ ಕೊನೆಯ ಬರೆಹವೆಂದರೂ ನಡೆದೀತು. ಅದೇನೋ ಹೇಳುತ್ತಾರಲ್ಲಾ, ದೀಪ ನಂದಿ ಹೋಗುವಾಗ ಒಂದು ಕ್ಷಣ ಅತಿಶಯ ಪ್ರಕಾಶಮಾನವಾಗಿ ಉರಿಯುತ್ತದಂತೆ ”

“ ಛೀ........ಇದೆಂತಹ ಮಾತು! ಇಂದು ನೀವು ಹೀಗೇಕೆ ಮಾತನಾಡುತ್ತಿದ್ದೀರೀಂದ್ರೆ...? ” ಮಾತು ಬೆಳೆಯಗೊಟ್ಟರೆ ವಿಕೋಪಕ್ಕೆ ಹೋಗಿ ಅವನಿಗೆ ಇನ್ನಷ್ಟು ತೊಂದರೆಯಾಗಬಹುದೆಂದು ಯೋಚಿಸಿ, “ ಅದು ಹೋಗಲಿ. ನಾನೇನೋ ನಿಮ್ಮನ್ನು ಕೇಳಬೇಕೆಂದು ಬಂದಿದ್ದೆ... ....ಓ. ನೆನಪಾಯಿತು ನಿಮ್ಮ ಮುಂಜಾನೆಯ ಕಾಫಿಯ ಸಂಗಡ ಈಗ ನಿಮಗೇನು ತರಹೇಳಲಿ? ”

“ ಏನೂ ಬೇಡ ” ಉತ್ತರ ಖಂಡತುಂಡವಾಗಿತ್ತು.

“ ಅಂದರೆ....? ”

“ ಯಾವುದರಲ್ಲಿಯೂ ಇಚ್ಛೆಯಿಲ್ಲ. ”

“ ನೀವು ಇಷ್ಟೇಕೆ ನಿರಾಶಾವಾದಿಗಳಾಗಿದ್ದೀರೆಂಬುದೇ ತಿಳಿಯದಾಗಿದೆ. ನಾಳೆ ಜೂನ ೧೫ಕ್ಕೆ ನಿಮ್ಮ ಬಿ. ಎ. ಪರೀಕ್ಷೆಯ ಪರಿಣಾಮವಲ್ಲವೇ? ನಿಮ್ಮ ಪ್ರಕೃತಿಯೂ ಸುಧಾರಿಸುತ್ತಲಿದೆ. ನೀವು ಫಸ್ಟ್ ಕ್ಲಾಸು ಬರುವದಂತೂ ಖಂಡಿತ. ಆ ಮೇಲೇನು... ”

“ ಜೂನ ೧೫! ಸುಮಿತ್ರಮ್ಮಾ, ಆ ಸುದಿನವೋ ದುರ್ದಿನವೋ ಬರಲಿಕ್ಕೆ ಇನ್ನೂ ಸಂಪೂರ್ಣ ಹದಿನೆಂಟು ದಿನಗಳು! ” ಮೂರ್ತಿಯ ಮಾತಿನಲ್ಲಿ ನಿರಾಶೆಯ ಸ್ವರವೇ ಮುಖ್ಯ ಪಾತ್ರ ವಹಿಸುತ್ತಿತ್ತು. ಆದರೆ ಸುಮಿತ್ರಮ್ಮನಿಗೆ ಅದರ ಅರಿವಾಗಲಿಲ್ಲ.

“ ಅದೆಷ್ಟು ಆತುರತೆ ನಿಮ್ಮಲ್ಲಿ! ಪರೀಕ್ಷೆಯಾಗಿ ಎರಡು ತಿಂಗಳು ಕಳೆದವರು- ಇನ್ನು ಕೇವಲ ಹದಿನೈದು ದಿನ ತಡೆಯಲಾರಿರಾ? ಆ

ಮೇಲೆ ಮುಂದೆ ಹೇಗೆ........?" ಅವಳ ಮಾತಿನಲ್ಲಿ ಒಂದು ಕೊಂಕು ಅಡಕವಾಗಿದ್ದಿತು.

ಮೂರ್ತಿ ಅದಕ್ಕುತ್ತರವಾಗಿ ಅರ್ಥವಿಲ್ಲದ ನಗೆಯೊಂದನ್ನು ಮಾತ್ರ ನಕ್ಕ.

" ಅದು ಹೋಗಲಿ. ಈಗ ನಿಮಗೆ ಏನು ತರಹೇಳಲಿ, ಅದನ್ನು ಮೊದಲು ಹೇಳಿರಿ. ನನಗೆ ಮತ್ತೆ ಬೇರೆ ವಾರ್ಡಿಗೆ ಹೋಗಬೇಕು ". ಮತ್ತೆ ಕರ್ತವ್ಯದಕ್ಷಳಾದಳು ನರ್ಸು ಸುಮಿತ್ರಮ್ಮ

" ನನಗಂತೂ ಏನೂ ಬೇಡ. ಒಂದು ವೇಳೆ ನೀವು ಹಾಗೆ ಒತ್ತಾಯ ಪಡಿಸುತ್ತಿದ್ದರೆ, ನಿಮಗೆ ಸರಿಕಂಡದ್ದನ್ನು ಕಳಿಸಿರಿ. ನಿಮ್ಮ ಅಪ್ಪಣೆಯೆಂದು ತಿಳಿದು ಗಂಟಲಲ್ಲಿ ಸುರುವಿಕೊಳ್ಳುವೆನು."

" ಅಪ್ಪಣೆ ಇರಲಿ, ಇಲ್ಲವೆ ರಿಕ್ವೆಸ್ಟ ಇರಲಿ; ನೀವಂತೂ ಈಗ ಬಿಸ್ಕಿಟ್ಟು-ಕಾಫಿ ತೆಗೆದುಕೊಳ್ಳಬೇಕು. ಈಗ ಕಳಿಸಿಕೊಡುತ್ತೇನೆ."

" ಆಗಲಿ".

"ಆಗಲಿ" ಮೂರ್ತಿಯು ಮಾತನ್ನೇ ಸುಮಿತ್ರಮ್ಮ ಪಡಿನುಡಿದಳು. "ಆಗಲಿ ಅಂತೆ ಆಗಲಿ! ನೀವಿನ್ನೂ ಸಣ್ಣ ಸಣ್ಣ ಹುಡುಗರಂತಿರುವಿರಿ. ನಿಮ್ಮ ಹೊಟ್ಟೆಗಾಗಿ ಕೂಡ ಎರಡನೆಯವರೇ ಒತ್ತಾಯಪಡಿಸಬೇಕು. " ಸುಮಿತ್ರಮ್ಮ ಮುಗುಳುನಗೆಯೊಂದನ್ನು ಬೀರಿ ಹೊರಟುಹೋದಳು.

ಸುಮಿತ್ರಮ್ಮ ಹೊರಟುಹೋದರೂ ಅವಳ ಕೊನೆಯ ಮಾತು ಇನ್ನೂ ಮೂರ್ತಿಯ ಕಿವಿಯಲ್ಲಿ ಸುತ್ತುತ್ತಿತ್ತು. " ನೀವಿನ್ನೂ ಸಣ್ಣ ಹುಡುಗರಂತಿರುವಿರಿ. " ಹೌದು. ಅವನ ಮುಖದಿಂದ ಆ ಮಾತು ತಾನೇ ತಾನಾಗಿ ಇನ್ನೊಮ್ಮೆ ಉಸುರಿತು. " ತಾನು ನಿಜವಾಗಿಯೂ ಚಿಕ್ಕ ಮಕ್ಕಳಂತಿರುವೆನೇ ? " ತನ್ನ ಮನವನ್ನು ತಾನೇ ಕೇಳಿಕೊಂಡ ಮೂರ್ತಿ. ಆ ವಿಚಾರದೊಂದಿಗೆ ಅವನ ತಾಯಿಯ ಮಮತೆಯ ಮೂರ್ತಿ ಮೂರ್ತಿಯ ಕಣ್ಣೆದುರು ಸುಳಿದು ಹೋಯಿತು. ಅವರೂ ಆಗಾಗ ಅನ್ನುತ್ತಿದ್ದರು. " ಮೂರ್ತಿ, ನೀನು ಎಷ್ಟು ಬೆಳೆದು ದೊಡ್ಡವನಾದರೂ ನಿನ್ನ ಬುದ್ಧಿ ಮಾತ್ರ ಬೆಳೆಯಲಿಲ್ಲ ನೋಡು. ತೀರ ಸಣ್ಣ ಹುಡುಗನಾಗಿರುವಿ. ಯಾವುದನ್ನೂ ವಿಚಾರಿಸುವದಿಲ್ಲ.......... "

ಅವರು ಹಾಗೆ ಅನ್ನುವದು ಸತ್ಯವಾಗಿದ್ದಿತೆಂಬುದು ಅವನಿಗೆ ಆಗ ತಿಳಿಯುತ್ತಿರಲಿಲ್ಲ. ತನ್ನ ತಾಯಿ ಇದ್ದಾಗಿನ ತನ್ನ ದಿನಚರಿಯನ್ನು ನೆನೆದುಕೊಂಡ ಮೂರ್ತಿ. ಆಗ ತಮ್ಮ ಮನೆಯೆಂದರೆ ಸಂತೋಷದ ಆಗರವಾಗಿದ್ದಿತು. ಪೂರ್ವಾರ್ಜಿತ ಉತ್ಪನ್ನವೂ ಸಾಕಷ್ಟಿತ್ತು; ತಂದೆಯವರಿಗೂ ಕೈತುಂಬ ಸಂಬಳ. ಮನೆಯಲ್ಲಿ ಜನರೂ ಹೆಚ್ಚಾಗಿರಲಿಲ್ಲ- ತಂದೆ, ತಾಯಿ, ತನ್ನಕ್ಕ ಮತ್ತು ತಾನು. ನಾಲ್ಕೇ ಜನ. ತನ್ನನ್ನು ಕಂಡರಂತೂ ಎಲ್ಲರೂ ಪ್ರೀತಿಸುವವರೇ.

ಹೀಗೆ ವಿಚಾರಿಸುತ್ತಿದ್ದಂತೆ ತಾನು ಹಾಯಸ್ಕೂಲಿನಲ್ಲಿ ಅಭ್ಯಾಸ ಮಾಡುತ್ತಿದ್ದಾಗ ನಡೆದ ಸಂಗತಿಯೊಂದು ಮೂರ್ತಿಯ ವಿಚಾರ ಸರಣಿಯಲ್ಲಿ ಹಾಯ್ದು ಹೋಯಿತು. ಆಗ ಮೂರ್ತಿ ೬ನೆಯ ತರಗತಿಯಲ್ಲಿ ಓದುತ್ತಿದ್ದ. ಒಂದಿನ ಮನೆಗೆ ಬಂದು ತಂದೆಗೆ ಹೇಳಿದ-ತನಗೆ ಮರುದಿನ ಶಾಲೆಗೆ ಹೋಗುವದರೊಳಗಾಗಿ ಒಂದು ಹೊಸ ಫೌಂಟನ್‌ಪೆನ್ನು ಬೇಕೆಂದು. ಅದಕ್ಕೆ ಅವರು, “ ಈಗೇಕೆ-ಇಷ್ಟು ಅವಸರ, ಈಗ ನನ್ನ ಹಳೆಯ ಪೆನ್ನನ್ನೇ ಉಪಯೋಗಿಸು. ಮುಂದೆ ಕಾಲೇಜಕ್ಕೆ ಹೋಗುವಾಗ ಹೊಸದೊಂದು ಪಾರಕರ ಪೆನ್ನನ್ನೇ ಕೊಳ್ಳೋಣವಂತೆ ” ಎಂದು ಅಂದರು. ಮೂರ್ತಿಗೆ ಅತಿಶಯವಾದ ಅವಮಾನವಾದಂತಾಯಿತು. ಏನೂ ಮಾತಾಡಲಿಲ್ಲವಾದರೂ ಮುಖವನ್ನು ಗಂಟಿಕ್ಕಿ ತನ್ನ ಅಸಮ್ಮತಿಯನ್ನು ಸೂಚಿಸಿದ. ಅದನ್ನರಿತ ಅವರು ಮರುಕ್ಷಣವೇ ಅವನೊಂದಿಗೆ ಪೇಟೆಗೆ ಹೋಗಿ ಹೊಸ ಪೆನ್ನೊಂದನ್ನು ಕೊಂಡುಕೊಟ್ಟಿದ್ದರು. ಅವರಿದ್ದಾಗ ಅಂಥ ತೀರ ಕ್ಷುಲ್ಲಕ ತೊಂದರೆ ಕೂಡ ತನಗಾಗುತ್ತಿರಲಿಲ್ಲ. ಅಷ್ಟು ಸುಖ ಸೌಕರ್ಯಗಳು ಆಗ ಆತನಿಗಿದ್ದರೂ ಅವುಗಳ ಮಹತ್ವ ಅವನಿಗಿರಲಿಲ್ಲ. ಚಿಕ್ಕ ಮಕ್ಕಳಂತೆ ಯಾವಾಕಲೂ ; ಪ್ರತಿಯೊಂದಕ್ಕೂ “ ಮೂಗು ಮುರಿಯುವದೇ ” ಅವನಿಗೆ ಅಭ್ಯಾಸವಾಗಿತ್ತು. ತನ್ನ ಅಕ್ಕನ ಮದುವೆಯ ಕಾಲಕ್ಕಂತೂ ಅಳಿಯ ದೇವರಿಗಿಂತ ಹೆಚ್ಚು ಮೂರ್ತಿಯೇ ಶೃಂಗರಿಸಲ್ಪಟ್ಟಿದ್ದ. ಆಗ ಯಾರೋ ಒಬ್ಬರು ಅಂದಿದ್ದರು, “ ಮೂರ್ತಿರಾಯರದೂ ಲಗ್ನ ನಿಶ್ಚಯವಾಗಿದೆಯೇ ? ” ಎಂದು.

ಇಷ್ಟೊಂದು ಸುಖಮಯವಾಗಿ ಸಾಗುತ್ತಿದ್ದ ಮನೆತನಕ್ಕೆ ಅಂಥ

ಭಯಂಕರವಾದ ಪೆಟ್ಟು ತಗಲುವದೆಂದು ಯಾರೂ ಯೋಚಿಸುವಂತಿರಲಿಲ್ಲ. ಮೂರ್ತಿ ಆಗ ಮ್ಯಾಟ್ರಿಕ ಪಾಸಾಗಿ, ಎಫ್. ವಾಯ್‌ದಲ್ಲಿ ಓದುತಿದ್ದ. ಆಗಂತೂ ರಾಜಕುಮಾರನಂತೆ ಮೂರ್ತಿ ಸದಾ ಕಾಲ ನಗುಮುಖವುಳ್ಳವನಾಗಿರುತ್ತಿದ್ದ. ಹೌದು ಯಾಕೆ ಇರಬಾರದು ?

ನೆನೆಯುತ್ತಿದ್ದಂತೆ ಆ ದಿನದ ವಿಚಾರ ಬಂದು ಮೂರ್ತಿಯನ್ನು ಗಡಗಡನೆ ನಡುಗಿಸಿ ಬಿಟ್ಟಿತು. ಅಂದು ಆತ ಕಾಲೇಜು ಮುಗಿಸಿಕೊಂಡು ಮನೆಗೆ ಹೊರಟಿದ್ದ. ದಾರಿಯಲ್ಲಿ ಯಾರೋ ಹೇಳಿದರು "ಮೂರ್ತಿ, ನಿಮ್ಮ ಮನೇ ಮುಂದೆ ಏನೋ ಗದ್ದಲ" ಎಂದು. ಕಾಲುಗಾಡಿಯನ್ನು ಹತ್ತಿ ಒಂದೇ ನಿಮಿಷದಲ್ಲಿ ಮನೆ ಕಂಡಿದ್ದ. ಅದನ್ನು ನೋಡಿ ಅವನಿಗೆ ಯಾವುದೂ ಅರ್ಥವಾಗಲಿಲ್ಲ. ಮನೆ ಮುಂದೆ ಜನ ಕಿಕ್ಕಿರಿದು ನೆರೆದಿದ್ದಿತು. ಐದಾರು ಜನ ಪೋಲೀಸ ಅಧಿಕಾರಿಗಳೂ ಇದ್ದರು. ಮನೆಯಲ್ಲಿಯ ಸಾಮಾನುಗಳನ್ನು ಒಂದೊಂದಾಗಿ ಹೊರಗೆ ತಂದಿಡುತ್ತಲಿದ್ದರು. ಯಾರೋ ಒಬ್ಬರು ಅವುಗಳ ಯಾದಿಯೊಂದನ್ನು ತಯಾರಿಸುತ್ತಲಿದ್ದರು.

"ಪಾಪ, ಎಂಥ ಜನರಿಗೆ ಎಂಥ ಕಾಲ ಬಂತು! ಜಗತ್ತಿನಲ್ಲಿ ಯಾರನ್ನೂ ನಂಬಬಾರದು. ಉಪಕಾರ ಮಾಡಿದವರಿಗೆ ಈ ರೀತಿ ಅಪಕಾರ ಬಗೆಯಬೇಕೆ........?' ಎಂದು ಯಾರೋ ಒಬ್ಬ ಮರುಗಿದ್ದ. ಇನ್ನೊಬ್ಬ ಪಿಸುಗುಟ್ಟಿದ್ದ, "ರಾಯರ ಮನೆ ಜಪ್ತಿ!" ಎಂದು. ಆದರೆ ಮೂರ್ತಿಗೆ ಆದಾವುದೂ ಅರ್ಥವೇ ಆಗಲಿಲ್ಲ. ಮನೆಯಲ್ಲಿ ಹೋಗಬೇಕೆಂದರೆ ಜನರ ದಟ್ಟಣೆ ವಿಪರೀತವಾಗಿದ್ದಿತು. ಯಾವುದೋ ಶಕ್ತಿ ತಂದುಕೊಂಡು ಜನರನ್ನು ನೂಕಿ ಒಳಸೇರಿ ನೋಡುತ್ತಾನೆ—ಮನೆಯಲ್ಲಿ ತಂದೆಯಿರಲಿಲ್ಲ; ತಾಯಿ ಕಣ್ಣೀರು ಸುರಿಸುತ್ತ ಕುಳಿತಿದ್ದರು; ಸುತ್ತಲೂ ನೆರೆಹೊರೆಯ ಹೆಂಗಸರು ಏನೋ ಸಮಾಧಾನ ಹೇಳುತ್ತಲಿದ್ದರು. ಅವನ ತಾಯಿ ಮೂರ್ತಿಯನ್ನು ಕಂಡು, "ಮೂರ್ತೀ, ಅವರೆಲ್ಲಿ ಹೋದರು ನೋಡಪ್ಪಾ" ಎಂದು ಕೂಗಿಕೊಂಡರು. ಮೂರ್ತಿಗೆ ಏನೂ ತಿಳಿಯಲೇ ಇಲ್ಲ.

ಹೊರಗೆ ಬಂದು ಪೋಲೀಸ ಅಧಿಕಾರಿಯೊಬ್ಬನನ್ನು ಕರೆದು ಆತ

ನನ್ನೇ ಇಂಗ್ಲೀಷಿನಲ್ಲಿ ಕೇಳಿದ. ಅವನು ಅದಕ್ಕೆ "ಬೆದರುವ ಕಾರಣ ವೇನೂ ಇಲ್ಲ. ಹಣ ತುಂಬಿದರೆ ಎಲ್ಲ ಸಾಮಾನು ತಿರುಗಿ ಒಪ್ಪಿಸು ವರು" ಎಂದ.

"ಎಂಥ ಹಣ?" ಮೂರ್ತಿ ಕುತೂಹಲದಿಂದ ಕಿರುಚಿಕೊಂಡ.

"ನಿಮಗೆ ಗೊತ್ತೇ ಇಲ್ಲವೇ?" ಅಧಿಕಾರಿಗೆ ಆಶ್ಚರ್ಯವಾಯಿತು. ಬಲ್ಲವರ ಠೀವಿಯಲ್ಲಿ ಹೇಳತೊಡಗಿದ. "ನಿಮ್ಮ ತಂದೆಯವರು ಇನಾಂದಾರ ಆರ್. ಆರ್. ಅವರಿಗೆ ಇಪ್ಪತ್ತು ಸಾವಿರ ರೂಪಾಯಿಗಳಿಗೆ ಜಾಮೀನು ಆಗಿದ್ದರು. ಆದರೆ ಆ ಇನಾಂದಾರರು ತೀರಿಕೊಂಡ ಬಳಿಕ ಅವರ ಮಕ್ಕಳು ಆ ಹಣವನ್ನು ಸರಕಾರಕ್ಕೆ ತುಂಬದೆ, ಕುವಿಚಾರದಿಂದ ತಮ್ಮ ಆಸ್ತಿಯನ್ನೆಲ್ಲ ಎರಡನೆಯವರ ಹೆಸರಿನಲ್ಲಿ ಮಾಡಿಟ್ಟರು. ಈಗ ಆ ಹಣ ತುಂಬಬೇಕಾಗಿದೆ. ಅವರಿಂದಂತೂ ಹಣ ವಸೂಲಾಗಲಿಕ್ಕೆ ಶಕ್ಯವಿಲ್ಲ. ಕಾರಣ ನಿಮ್ಮ ತಂದೆ ಜಾಮೀನುದಾರರಿಂದ ಅದನ್ನು ವಸೂಲು ಮಾಡಬೇಕಾಗುತ್ತದೆ. ಕಾರಣ ನಿಮ್ಮ ತಂದೆಯವರಿಗೆ ಅದನ್ನು ತುಂಬಬೇಕಾಗಿ ಬಂತು. ನಿಮ್ಮ ತಂದೆಯವರು ಎರಡು ತಿಂಗಳ ಅವಧಿಯನ್ನು ಕೇಳಿಕೊಂಡರು. ಆದರೆ ಸರಕಾರದವರು, ನಿಮ್ಮ ತಂದೆ ಯವರೂ ಆ ಇನಾಂದಾರರಂತೆ ಏನಾದರೂ ಕುವ್ಯವಸ್ಥೆ ಮಾಡಬಹು ದೆಂದು ಹೆದರಿ, ಕೂಡಲೇ ಮನೆಗೆ ಜಪ್ತಿ ಹುಕುಂ ತೆಗೆದಿದ್ದಾರೆ"....

ಮೂರ್ತಿಗೆ ಎಲ್ಲವೂ ಅರ್ಥವಾಯಿತು. ಹೋಗಿ ಆ ಇನಾಮದಾ ರರ ಕುತ್ತಿಗೆ ಹಿಚುಕಲೇ ಎನ್ನಿಸಿತು! ಏನೂ ಮಾತನಾಡದೆ, ತಂದೆ ಎಲ್ಲಿ ಹೋದರೆಂದು ನೋಡಲಿಕ್ಕೆ ಬೈಸಿಕಲ್ಲು ಹತ್ತಿ ಹೊರಟುಹೋದ.

ಮೂರ್ತಿ ತಿರುಗಿ ಮನೆಗೆ ಬಂದಾಗ ರಾತ್ರಿ ಎಂಟೂವರೆ ಆಗಿ ಹೋಗಿತ್ತು. ಅವನ ತಂದೆಯವರ ಭೆಟ್ಟಿಯೂ ಆಗಿರಲಿಲ್ಲ; ಮನೆಗೂ ಬಂದಿರಲಿಲ್ಲ. ಪೋಲೀಸ ಠಾಣೆಗೂ ವರದಿಯನ್ನು ಕೊಟ್ಟು ಬಂದಿದ್ದ. ಎರಡು ದಿನಗಳುರುಳಿದರೂ ತಂದೆಯ ಬಗ್ಗೆ ಯಾವ ವಿಚಾರವೂ ತಿಳಿದಿ ರಲಿಲ್ಲ. ಮನೆ ಮಸಣದ ಕಲ್ಪನೆ ತಂದುಕೊಡುವಂತಾಗಿತ್ತು. ಪರವೂ ರಲ್ಲಿದ್ದ ಆಪ್ತ ಮಿತ್ರರಿಗೆ ತಂತಿ ಕೊಟ್ಟಿದ್ದ ಮೂರ್ತಿ. ಆದರೆ ಯಾರಿಂದಲೂ ಸಮಾಧಾನಕಾರಕ ಉತ್ತರ ಬಂದಿರಲಿಲ್ಲ. ಬೆಂಕಿಯಲ್ಲಿ

ಹುಲ್ಲು ಚಲ್ಲಿದಂತೆ, "ಹೀಗೇಕಾಯಿತು?" ಎಂದು ಕೇಳುವರೇ ಎಲ್ಲರೂ. ಆದರೆ ಮರುದಿನ ಮುಂಜಾನೆ ಪೋಲೀಸ ಜವಾನನೊಬ್ಬ ಬಂದು ಹೇಳಿದ್ದ, "ನಿಮ್ಮ ತಂದೆಯವರು ಊರ ಹೊರಗಿನ ಹಾಳು ಬಾವಿಯಲ್ಲಿ ಬಿದ್ದು ಪ್ರಾಣನೀಗಿದರು" ಎಂದು!

ಮೂರ್ತಿಯ ಕೆನ್ನೆಗೆ ಬಲವಾದ ಏಟು ಬಿದ್ದಂತಾಯ್ತು. "ಅಯ್ಯೋ!" ಎಂದು ಕಿರುಚಿಕೊಂಡ.

ನೆರೆಯ ಕೋಣೆಯಲ್ಲಿ ರೋಗಿಯನ್ನು ಪರೀಕ್ಷಿಸುತ್ತಿದ್ದ ನರ್ಸ ಸುಮಿತ್ರಮ್ಮ ಅದನ್ನು ಕೇಳಿ ಧಾವಿಸಿ ಬಂದಳು. "ಏನಾಯಿತು ಮೂರ್ತಿ ರಾಯರೇ?" ಎಂದು ಕೂಗುತ್ತ. ಮೂರ್ತಿಯ ಕಣ್ಣುಗಳು ಮುಚ್ಚಿದ್ದವು; ಎಡಗೈ ಹಣೆಯ ಮೇಲಿತ್ತು; ತುಟಿಗಳು ನಡುಗುತ್ತಿದ್ದವು; ಮೈಯೆಲ್ಲ ಸಂಪೂರ್ಣ ಬೆವರಿತ್ತು! ಸುಮಿತ್ರಮ್ಮನಿಗೆ ಏನೂ ಅರ್ಥವಾಗಲಿಲ್ಲ. ಮೃದುವಾಗಿ ಅವರ ಮೈಮೇಲೆ ಕೈಯಾಡಿಸುತ್ತಿದ್ದಳು. ಅದೆಷ್ಟೋ ವೇಳೆಯ ನಂತರ ಮೂರ್ತಿ ಕಣ್ಣು ತೆರೆದ.

"ಸುಮಿತ್ರಮ್ಮಾ, ನನಗೇಕೋ ಹೆದರಿಕೆಯಾಗುತ್ತಿದೆ. ಇಲ್ಲಿಯೇ ತುಸು ಕುಳಿತುಕೊಳ್ಳುವಿರಾ?" ಮೂರ್ತಿಯ ಕಣ್ಣುಗಳಲ್ಲಿ ದೈನ್ಯವು ಒಡೆದು ಕಾಣುತ್ತಿತ್ತು.

"ಓಹೋ ಕೂಡ್ರುತ್ತೇನಲ್ಲ. ಅದರಲ್ಲೇನಿದೆ? ಆದರೆ ಹೆದರಿಕೆ ಎಂತಹದು ಮೂರ್ತಿರಾಯರೇ? ನಾನಿಲ್ಲಿಯೇ ಇದ್ದೇನಲ್ಲ......ನಿಮ್ಮ ಕೈಯಲ್ಲಿ ಇನ್ನೂ ನಡುಕವಿದೆಯಲ್ಲ!" ನಿಜವಾಗಿಯೂ ಅವಳ ಧ್ವನಿಯಲ್ಲಿ ಒಂದುತರದ ಆತ್ಮೀಯತೆ ತುಂಬಿಕೊಂಡಿದ್ದಿತು.

ಮೂರ್ತಿ ತನ್ನೆರಡೂ ಕೈಗಳಿಂದಲೂ ಸುಮಿತ್ರಮ್ಮನ ಒಂದು ಕೈಯನ್ನು ಬಲವಾಗಿ ಹಿಡಿದುಕೊಂಡಿದ್ದನು. ಅವಳ ಬಲಗೈ ಅವನ ಹಣೆಯ ಮೇಲಿನ ಮುಂಗುರುಳುಗಳನ್ನು ತೀಡುತ್ತಲಿತ್ತು!

## ೨

ಜೂನ ಹದಿನಾಲ್ಕನೆಯ ದಿನಾಂಕ. ರಾತ್ರಿ ಸುಮಾರು ಒಂಬತ್ತು ಗಂಟೆಯಾಗಿರಬಹುದು: ನಿತ್ಯದ ವಾಡಿಕೆಯಂತೆ ನರ್ಸ ಸುಮಿತ್ರಮ್ಮ

ಹಾಸ್ಪಿಟಲಿನಿಂದ ತನ್ನ ಮನೆಗೆ ಹೋಗುವ ಮೊದಲು ಮೂರ್ತಿಯನ್ನು ಕಾಣಲು ಬಂದಳು. ಇತ್ತೀಚೆ ಮೂರ್ತಿಯ ಮೈಯಲ್ಲಿ ಬಹಳೇ ಅಶಕ್ತತೆ ಬೆಳೆದು ಬಂದಿದ್ದಿತು. ಯಾವಾಗಲೂ ಹಾಸುಗೆಯ ಮೇಲೆ ಬಿದ್ದು ಕೊಂಡೇ ಇರುತ್ತಿದ್ದ. ಎದ್ದು ಸುಮಾರು ಅರ್ಧ ತಾಸು ಕುಳಿತರೂ ಅವನಿಗೆ ಅದು ಸಹಿಸುತ್ತಿರಲಿಲ್ಲ. ಕೂಡಲೇ ಎದೆಯಲ್ಲಿ ಅತಿಶಯವಾದ ನೋವು ಕಾಣಿಸಿಕೊಳ್ಳುತ್ತಿತ್ತು. ಆಯಾಸ ಮಾಡಿಕೊಂಡು ಕೂಡಲೇ ಬಾರದೆಂದು ಡಾಕ್ಟರರ ಅಭಿಪ್ರಾಯವೂ ಇತ್ತು. ನರ್ಸ ಸುಮಿತ್ರಮ್ಮ ನಂತೂ ತನಗೆ ಸಮಯ ದೊರೆತಾಗಲೆಲ್ಲ ಮೂರ್ತಿಯ ಹತ್ತಿರವೇ ಇದ್ದು ಅವನ ನೊಂದ ಮನವನ್ನು ರಮಿಸಲು ಯತ್ನಿಸುತ್ತಿದ್ದಳು. ರಾತ್ರಿ ಮನೆಗೆ ಹೋಗುವಾಗ ದಿನಾಲು ತಪ್ಪದೆ ಬಂದು, ಅವನ ಪ್ರಕೃತಿಯಲ್ಲಿ ಏನಾದರೂ ಹೆಚ್ಚು ಕಡಿಮೆಯಾಗಿದೆಯೇ ಎಂದು ನೋಡಿಕೊಂಡು ಎರಡು ಸವಿಮಾತುಗಳನ್ನಾಡಿ ಹೋಗುತ್ತಿದ್ದಳು.

“ ನಿದ್ರೆ ಇನ್ನೂ ಬಂದಿಲ್ಲವೇ ? ” ಸುಮಿತ್ರಮ್ಮ ಕೋಣೆಯೊಳಗೆ ಪ್ರವೇಶಿಸುತ್ತಲೇ ಕೇಳಿದಳು.

“ ಹಾ, ಏನೆಂದರೂ ಸರಿಯೇ. ದಿನದ ಇಪ್ಪತ್ತು ನಾಲ್ಕೂ ತಾಸು ಮಲಗಿಕೊಂಡಿರುವಾಗ ಅದು ಹೇಗೆ ಗೊತ್ತಾಗಬೇಕು ? ಯಾವಾಗಲೋ ನಿದ್ರೆ ಹತ್ತುವದು, ಯಾವಾಗಲೋ ಎಚ್ಚರಾಗುವದು ! ” ಮೂರ್ತಿ ದಿಂಬಿಗೊರಗಿಕೊಂಡೇ ಇದ್ದ.

“ ಆದರಲ್ಲಿಯೂ ಈ ದಿನ ಹೇಗೆ ತಾನೆ ನಿದ್ರೆ ಬಂದೀತ.! ನಾಳೆಯೇ ನಿಮ್ಮ ರಿಝುಲ್ಟು; ನೀವು ಒಂದನೇ ತರಗತಿಯಲ್ಲಿ ಬರುವದಂತೂ ಖಂಡಿತವೇ........”

“ ನನಗೆ ಯಾವ ಕ್ಲಾಸು ಬಂದರೂ ಅಷ್ಟೇ ಸುಮಿತ್ರಮ್ಮ, ”

ಸುಮಿತ್ರಮ್ಮ ಅಷ್ಟಕ್ಕೇ ಸುಮ್ಮನಾದಳು. ಇತ್ತೀಚೆ ಮೂರ್ತಿ ಬಹಳೇ ನಿರಾಶಾವಾದಿಯಾಗಿದ್ದ. ಮತ್ತೆ ಅವನನ್ನು ಕೆಣಕುವದು ಸರಿಯಲ್ಲವೆಂದು ಭಾವಿಸಿರಬೇಕು ಅವಳು. ಅವಳ ದೃಷ್ಟಿ ಸಹಜವಾಗಿ ಅಲ್ಲಿದ್ದ ಮೇಜಿನ ಕಡೆಗೆ ಹೋಯಿತು. ಒಮ್ಮೆಲೇ ಕೇಳಿದಳು.
“ ಮತ್ತೇನೋ ಬರೆದಂತಿದೆಯಲ್ಲ? ಪೆನ್ನು ಹಾಗೇ ಬಿದ್ದಿದೆ. ”

“ ಏನೂ ಇಲ್ಲ. ನನ್ನಕ್ಕನಿಗೊಂದು ಪತ್ರ ಬರೆದೆ. ಅಷ್ಟೇ ”

“ ಏನು ಎಂಥ ಅವಶ್ಯಕತೆ ಏನಿತ್ತೀಗ ? ನಾನು ಬಂದ ಮೇಲೆ ಕೇಳಿದ್ದರೆ ಬರೆಯುತ್ತಿರಲಿಲ್ಲವೇ ? ”

“ ಹೌದು, ಹಾಗೂ ಮಾಡಬಹುದಾಗಿತ್ತು. ಏನೋ ಬರೆದು ಬಿಟ್ಟೆ. ಆಯ್ತು. ”

ಕ್ಷಣಹೊತ್ತು ತಡೆದು ಮೂರ್ತಿ ಕೇಳಿದ, “ ಸುಮಿತ್ರಮ್ಮಾ, ನೀವೇನೂ ಬೇರೆ ಭಾವಿಸಬೇಡಿರಿ. ನಾನೊಂದು ಮಾತು ಕೇಳ ಬೇಕೆಂದಿದ್ದೇನೆ....... ”

“ ಅಂದರೆ ? ”

“ ವಿಶೇಷವೇನೂ ಇಲ್ಲ.......ನನಗೀಗ ಜಗತ್ತಿನಲ್ಲಿ ನನ್ನಕ್ಕನನ್ನು ಬಿಟ್ಟರೆ ಇನ್ನಾರೂ ಆಪ್ತರಾದವರಿಲ್ಲ. ಈಗ ನನ್ನದೊಂದೇ.......ಆಶೆ ಇತ್ತು. ಒಮ್ಮೆ...... ”

ಸುಮಿತ್ರಮ್ಮ ಮೂರ್ತಿಯನ್ನು ಒಮ್ಮೆಲೇ ತಡೆದಳು. “ ಆಶೆ–ಗೀಶೆ ಎಂದು ಹೀಗೇಕೆ ಹುಚ್ಚರಂತೆ ಮಾತನಾಡುತ್ತಿದ್ದೀರಿ ? ನಿಮಗೇನಾಗಿದೆ ? ನೀವು ಹೀಗೆಲ್ಲಾ ಮಾತನಾಡಿ ಸುಮ್ಮನೆ ಮನಕ್ಕೆ ತ್ರಾಸು ಮಾಡಿಕೊಳ್ಳಬೇಡಿರೆಂದು ನಾನೆಷ್ಟು ಸಾರೆ ನಿಮಗೆ ಹೇಳಬೇಕು ! ”

“ ಅದಕ್ಕೇ ನಾನು ನಿಮ್ಮನ್ನು ಕೇಳಿದ್ದು, ಬೇರೆ ಏನೂ ಭಾವಿಸ ಬೇಡಿರಿ ಎಂದು. ಅದೇಕೋ ಹಾಗೆ ಅನ್ನಿಸುತ್ತಲಿದೆ, ಹೇಳತೊಡಗಿದೆ, ಅಷ್ಟೆ. ನಿಮಗೆ ಕೆಡಕೆನಿಸುತ್ತಿದ್ದರೆ ಹೇಳುವದಿಲ್ಲ. ”

“ ನಾನು ಹಾಗೆ ಹೇಳಲಿಲ್ಲ. ನಿಮಗೇ ತ್ರಾಸಾಗುವದು ಎಂದೆ ”

“ ನನಗೇನು ತ್ರಾಸಾಗುವದಿಲ್ಲ. ಆದರೆ ಮನಸ್ಸಿಗೆ ಒಂದು ತರದ ನೆಮ್ಮದಿಯೇ ಆಗಬಹುದು. ”

ಸುಮಿತ್ರಮ್ಮ ಏನೂ ಮಾತನಾಡಲಿಲ್ಲ.

“ ಒಮ್ಮೆ ನನ್ನಕ್ಕನನ್ನು ನೋಡಬೇಕೆನ್ನಿಸುತ್ತಲಿದೆ ”

“ ಅದಕ್ಕೇಕಿಷ್ಟು ? ಕರೆಕಳುಹಿಸಬಹುದಲ್ಲ. ”

“ ಆದರೆ ಅವಳೀಗ ಬರುವಂತಿಲ್ಲ. ತುಂಬ ಬಸುರಿ. ”

" ಹೀಗೇನು! ಆದರೇನಾಯಿತು? ಇನ್ನು ಕೆಲದಿನ ತಡೆದು ಬರಬಹುದಲ್ಲ. ಅಥವಾ ಅಷ್ಟರಲ್ಲಿ ನೀವೇ ಅಲ್ಲಿಗೆ ಹೋಗಲೂ ಬಹುದು."

" ಆ ಬಹುದು-ಗಿಹುದು ನನಗೆ ಬೇಕಾಗಿಲ್ಲ. ಈಗ ಸದ್ಯ ಅವಳನ್ನು ನೋಡಬೇಕು. ಮನಸ್ಸು ಬಹಳೇ ಹಾತೊರೆಯುತ್ತಿದೆ."

ಉಪಾಯಗಾಣದೆ ಸುಮಿತ್ರಮ್ಮ ನಿರುತ್ತರಳಾದಳು. ಎರಡು ನಿಮಿಷ ತಡೆದು ಮೂರ್ತಿಯ ದೈನ್ಯಪೂರಿತ ಧ್ವನಿಯೊಂದು ಹೊರ ಬಂದಿತು. " ಸುಮಿತ್ರಮ್ಮಾ, ನಿಮ್ಮಲ್ಲಿ ನನ್ನದೊಂದು ಕೋರಿಕೆಯಿದೆ. ನನಗಾಗಿ ಅಷ್ಟು ಮಾಡಲಾರಿರಾ?"

" ಅಂತಹದೇನು ಮೂರ್ತಿರಾಯರೇ?"

" ಏನೂ ತಪ್ಪು ಭಾವಿಸಬೇಡಿರಿ. ನಾನು ಭಾವನಾವಶನಾಗಬಾರದೆಂದು ಅದೆಷ್ಟು ಪ್ರಯತ್ನಿಸಿದರೂ ಅದು ಅಸಾಧ್ಯವಾಗುತ್ತಲಿದೆ."

ಮೂರ್ತಿ ಏನು ಹೇಳುವನೋ ಎಂದು ಸುಮಿತ್ರಮ್ಮನ ಕುತೂಹಲ ಕೆರಳಿತು.

" ನನ್ನಕ್ಕ ನನ್ನನ್ನು ಯಾವಾಗಲೂ 'ಮೋರ್‍ಯಾ' ಎಂದು ಕರೆಯುವಳು. ಹಾಗೆ ಕರೆಯಿಸಿಕೊಳ್ಳುವಾಗ ನನಗೆ ಅದಾವುದೋ ಒಂದು ಬಗೆಯ ಪ್ರೀತಿ, ಹೆಮ್ಮೆಗಳು ಉಕ್ಕಿ ಬರುತ್ತಿದ್ದವು."

" ಅದಾರಿಗಾಗಲಿಕ್ಕಿಲ್ಲ?"

ಇಬ್ಬರೂ ಒಂದು ಕ್ಷಣ ಮೌನರಾಗಿದ್ದರು.

ಮೂರ್ತಿಯ ಹೃದಯ ಏನನ್ನೋ ಬೇಡುತ್ತಲಿತ್ತು- ಅದು ಸುಮಿತ್ರಮ್ಮನಲ್ಲಿ ದೊರೆಯಬಹುದೇ? ಎಂಬುದು ಅವನಿಗೆ ಬಗೆಹರಿಯದ ಸಮಸ್ಯೆಯಾಯಿತು. ಅದರಂತೆಯೇ ಸುಮಿತ್ರಮ್ಮನ ಸ್ಥಿತಿಯೂ ವಿಚಿತ್ರವಾಗಿದ್ದಿತು. ಮೂರ್ತಿ ಏನನ್ನೋ ಕೇಳಬೇಕೆಂದಿರುವನು, ಆದರೆ ಕೇಳಲೊಲ್ಲ, ಎಂಬುದನ್ನವಳು ಅರಿತರೂ ಅದರ ಸ್ಪಷ್ಟ ಕಲ್ಪನೆ ಅವಳಿಗಾಗಲಿಲ್ಲ.

" ಮೂರ್ತಿರಾಯರೇ, ನಿನ್ನೆ ನೀವು ನನಗೇನೋ ಕೊಡುತ್ತೇನೆ ಎಂದಿದ್ದಿರಲ್ಲ?"

" ಹಾ. ಹೌದು ಕೊಡಬಹುದಲ್ಲ."

" ಮತ್ತೆ ಬಹುದು ಏಕೆ, ಈಗಲೇ ಕೊಟ್ಟರಾಗದೇ ? "

ಮೂರ್ತಿ ಒಂದರೆ ನಿಮಿಷ ತಡೆದು, " ಓಹೋ ಈಗಲೇ ಕೊಡು ವೆನು. ಅದನ್ನು ಯಾರಿಗಾದರೂ ಕೊಡಬೇಕೆಂದಿದ್ದೆ. ಈಗ ಅದನ್ನು ಸ್ವೀಕರಿಸಲಿಕ್ಕೆ ನನ್ನಕ್ಕನನ್ನು ಬಿಟ್ಟರೆ ನಿಮ್ಮ ತರುವಾಯ ಯಾರೂ ಇಲ್ಲ. ನನ್ನಕ್ಕನಿಗೆ ಕೊಡಬೇಕೆನ್ನಿಸಿದಾಗ ನೀವೇ ಅದನ್ನವಳಿಗೆ ಒಪ್ಪಿಸಿರಿ " ಗೋಡೆಯ ಕಡೆಗೆ ಮುಖ ಹೊರಳಿಸಿ ತಲೆದಿಂಬಿನ ಬುಡದಲ್ಲಿದ್ದ ಒಂದು ನೋಟಬುಕ್ಕನ್ನು ತೆಗೆದು ಸುಮಿತ್ರಮ್ಮನ ಕೈಗಿತ್ತ ಮೂರ್ತಿ. ಆಗ ಅವನ ಕೈಯಲ್ಲಿ ನಡುಕವಿದ್ದುದನ್ನು ಸುಮಿತ್ರಮ್ಮ ತಿಳಿಯದಿರಲಿಲ್ಲ

" ಹೀಗೇಕೆ, ಮೂರ್ತಿರಾಯರೇ?" ಸುಮಿತ್ರಮ್ಮ ಗಾಬರಿಗೊಂಡಳು.

ಮೂರ್ತಿಯ ಕಣ್ಣಲ್ಲಿ ಉದುರಲಾರದ ಎರಡು ತೊಟ್ಟು ನೀರೂರಿದ್ದುವು. !

" ಏನೋ ಹುಚ್ಚನಂತೆ ಬರೆದಿದ್ದೇನೆ. ನಿಜವಾಗಿಯೂ ನನ್ನಕಿಂತ ಇದನ್ನು ನನ್ನಕ್ಕನ ಸಲುವಾಗಿ ಬರೆದಿದ್ದೇನೆ. ಅವಳಿಗೆ ಇದನ್ನು ಓದುವದರಲ್ಲಿ ಬಲು ಆಸಕ್ತಿ. " ಮೋರ್ತ್ಯಾ, ಯಾವಾಗಲೂ ಬರೆಯುತ್ತಿರು. ಎಷ್ಟು ಬೇಸರ ಬಂದರೂ ಬಿಡಬೇಡ. ಕಡೆಗೆ ನನ್ನ ಸಲುವಾಗಿಯಾದರೂ ಬರೆ " ಎಂದು ಒಂದಿನ ಹೇಳಿದ್ದಳು. ಏನೋ ಬರೆದು ಬಿಟ್ಟಿದ್ದೇನೆ ಇಂದಿಗೆ ಅದು ಮುಗಿಯಿತು. ಮನಸ್ಸು ಒಪ್ಪಿದರೆ ನೀವು ಓದಿರಿ. ಕಡೆಗೆ ನನ್ನಕ್ಕನಿಗೆ ಮುಟ್ಟಿಸಲು ಮಾತ್ರ ಮರೆಯಬೇಡಿರಿ" ಮೂರ್ತಿಯ ಧ್ವನಿಯಲ್ಲಿ ಒಂದು ನಡುಕ ಹುಟ್ಟುತ್ತಲಿತ್ತು. ಹೆಚ್ಚು ಮಾತನಾಡುವದಾಗಲಿಲ್ಲ ಅವನಿಂದ.

" ಅದೆಲ್ಲಾ ಸರಿ. ಆದರೆ ನೀವು ಇತ್ತೀಚೆ, ಹೀಗೇಕೆ ವಿಚಿತ್ರವಾಗಿ ಮಾತನಾಡುತ್ತಿದ್ದೀರಿಂದ್ರೆ?"

" ಏನೂ ಇಲ್ಲ. ಇನ್ನು ನೀವು ಹೋಗಬಹುದು. ರಾತ್ರಿ ಬಹಳವಾಯಿತು. ನಾನೂ ಮಲಗಿಕೊಳ್ಳುವೆನು."

ಸುಮಿತ್ರಮ್ಮ ಮೂರ್ತಿಯ ಹಣೆಯನ್ನೊಮ್ಮೆ ಮುಟ್ಟಿ ನೋಡಿ, ಮುಂಗುರುಳನ್ನು ನೇವರಿಸಿ, " ನಾನಿನ್ನು ಹೋಗಲಾ? ಏನೂ ವಿಚಾರಿ

ಸಬೇಡಿರಿ. ಸುಮ್ಮನೆ ನಿದ್ರೆ ಹಚ್ಚಿರಿ. ಮುಂಜಾನೆ ನಾನು ಮತ್ತೆ ಬರುತ್ತೇನೆ.'' ಎಂದಳು.

" ಗುಡ್‌ನಾಯಿಟ್ "

" ಗುಡ್‌ನಾಯಿಟ್ ''

೩

ಸುಮಿತ್ರಮ್ಮನ ವಾಸಸ್ಥಾನ ಅಷ್ಟೇನೂ ದೂರವಾಗಿರಲಿಲ್ಲ. ಇಂದು ಮೂರ್ತಿಯು ಸಂಗಡ ಮಾತನಾಡುತ್ತ ಬಹಳ ವೇಳೆ ಕಳೆದಿದ್ದಳು. ಮನೆಗೆ ಬರುವದರೊಳಗಾಗಿ ರಾತ್ರಿ ಹತ್ತು ಗಂಟೆಯಾಗುತ್ತ ಬಂದಿತ್ತು. ಇನ್ನು ಅಡಿಗೆ ಮಾಡಿ ಊಟ ಮಾಡುವದಂತೂ ಅಶಕ್ಯವೆಂದವಳಿಗೆ ತೋರಿತು. ಮಧ್ಯಾಹ್ನ ಮಾಡಿದ್ದು ಏನೋ ಶೇಸು ಉಳಿದಿತ್ತು. ಆದರೆ ಅದನ್ನು ತಿನ್ನುವ ಮನಸ್ಸಾಗಲಿಲ್ಲ. ಮೂರ್ತಿ ಬರೆದದ್ದನ್ನು ಓದುವ ಉತ್ಸುಕತೆ ಅವಳ ಹಸಿವು-ನೀರಡಿಕೆಗಳನ್ನು ಹಿಂಗಿಸಿಬಿಟ್ಟದ್ದಿತು. ಕಾಟಿನ ಬಳಿಯಲ್ಲಿದ್ದ ವಿರಾಮ ಖುರ್ಚಿಯೊಂದರಲ್ಲಿ ಓದಲೆಂದು ಕುಳಿತಳು. ಎದುರಿಗೆ ಗೂಟಕ್ಕೆ ನೇತಾಡುತ್ತಿದ್ದ ಥರ್ಮಾಸವು ಕಣ್ಣಿಗೆ ಬಿತ್ತು. ಮಧ್ಯಾಹ್ನ ಮಾಡಿದ ಕಾಫಿ ಅದರಲ್ಲಿನ್ನೂ ಉಳಿದಿತ್ತು. ಅದನ್ನೇ ಕುಡಿದು ಓದಲಿಕ್ಕೆ ಕುಳಿತಳು. ಅದರಲ್ಲಿ ಮೂರ್ತಿ ಬರೆದೇ ಬರೆದಿದ್ದ. ಸುಮಾರು ಇನ್ನೂರು ಪುಟಗಳಷ್ಟಾದರೂ ಇರಬಹುದು. ಸುಮಿತ್ರಮ್ಮ ಮೊತ್ತಮೊದಲಿನ ಪುಟವನ್ನು ತೆರೆದಳು. ಸುಮಾರು ಒಂದು ವರ್ಷದ ಪೂರ್ವದ ದಿನಾಂಕವನ್ನು ಅದರಲ್ಲಿ ಕಾಣಿಸಿತ್ತು. ಸುಮಿತ್ರಮ್ಮ ಓದತೊಡಗಿದಳು.

" ಇದು ನನ್ನ ದಿನಚರಿ. ಆದರೆ ದಿನಚರಿ ಎಂದರೆ ಇದು ಕೇವಲ ನಾನು ಮಾಡಿದ ಕೆಲಸಗಳ ಹೇಳಿಕೆಯಲ್ಲ. ಅದರಂತೆ ನಾನು ಮಾಡಿದ ಕೆಲಸಗಳ ಹಿರಿಮೆಯನ್ನು ಹೇಳಿಕೊಳ್ಳುವ ವಿವರವೂ ಅಲ್ಲ. ಹಾಗೆ ಬರೆದು ಎರಡನೆಯವರಿಗೆ ತೋರಿಸಿ ಅವರಲ್ಲಿ ನನ್ನ ಬಗೆಗೆ ಅಭಿಮಾನ, ಆದರಗಳನ್ನು ಹುಟ್ಟಿಸಬೇಕೆಂದೂ ನಾನು ಇದನ್ನು ಬರೆಯುತ್ತಿಲ್ಲ. ಕೇವಲ ನನ್ನ ಮನಸ್ಸಿನ ಸಮಾಧಾನಕ್ಕಾಗಿ ಮತ್ತು ಅದಕ್ಕೂ ಹೆಚ್ಚಾಗಿ

ನನ್ನ ಅಕ್ಕನ ಆಗ್ರಹಕ್ಕಾಗಿ ಇದನ್ನು ಬರೆಯುತ್ತಿದ್ದೇನೆ. ನನ್ನ ಅನುಭವಕ್ಕೆ ಬಂದ ಸಂಗತಿಗಳೆಲ್ಲವನ್ನೂ ನಾನಿಲ್ಲಿ ಬರೆಯಲೂ ಯತ್ನಿಸಿಲ್ಲ. ಮತ್ತು ಅದು ಎಂದಿಗೂ ಅಶಕ್ಯ. ಈ ದೇಹ, ಈ ಪ್ರಪಂಚದಲ್ಲಿ ಬಹಳ ದಿನ ಬಾಳಿಲ್ಲವಾದರೂ ಹಾಗೆ ಬಾಳಿದವರಿಗೆ ಬರಬೇಕಾದವುಗಳಿಗಿಂತಲೂ ಹೆಚ್ಚು ಕಟು ಅನುಭವಗಳನ್ನು ಉಂಡಿದೆ. ಮತ್ತೆ ಅಂಥವುಗಳೇ ಬಾರದಂತೆ ಯತ್ನಿಸುವದೊಂದೇ ನನಗೀಗ ಕಂಡು ಬರುವ ದಾರಿ. ನನ್ನಕ್ಕ ನನಗೆ ಯಾವಾಗಲೂ ಹೇಳುತ್ತಿರುವದು-"ಒಮ್ಮೆ ಆದ ತಪ್ಪುಗಳು ಪುನಃ ಆಗದಂತೆ ನೋಡಿಕೊಳ್ಳುವದೇ ಮೊದಲಿನ ತಪ್ಪಿಗೆ ಶಿಕ್ಷೆ" ಎಂದು. ಅದರಂತೆ ಆ ತಪ್ಪುಗಳು ಮರೆಯದಂತೆಯೂ ಅವೇ ಇನ್ನೊಮ್ಮೆ ಆಗದಂತೆಯೂ ಇರಬೇಕೆಂದು ಪ್ರಯತ್ನಿಸುತ್ತಿರುವದೇ ನನ್ನ ಧ್ಯೇಯ."

"ಈ ದಿನ ಕಾಲೇಜು ಆರಂಭವಾಯಿತು. ಇತಿಹಾಸ ಪ್ರೊಫೆಸರರಾದ ಶ್ರೀ ಐಯಂಗಾರ ಅವರು ಆ್ಯಂಟನೀ ಟ್ರಲೋಪನೆಂಬ ಒಬ್ಬ ಸುಪ್ರಸಿದ್ಧ ಇಂಗ್ಲಿಷ ಮನುಷ್ಯನ ಬಗ್ಗೆ ಕೆಲ ಮಾತುಗಳನ್ನು ಹೇಳಿದರು. ಆತ ತೀರ ಬಡವನಾಗಿದ್ದ. ಆತನಿಗೆ ಆ ಜೀವನ ಬೇಸರವಾಯಿತು. ಅವನಿಗೆ ಬೇಕಾದುದು ಮಾನ, ಹೆಸರು, ಪ್ರಸಿದ್ಧಿ ಮತ್ತು ಹಣ! ತಾನೊಬ್ಬ ಗಣ್ಯಸಾಹಿತಿಯಾಗಬೇಕೆಂದು ಒಂದು ದೊಡ್ಡ ಗುರಿಯನ್ನು ತನ್ನೆದುರು ಇಟ್ಟುಕೊಂಡಿದ್ದ. ಅವನು ಮಾಡುತ್ತಿದ್ದ ಆ ಕೆಲಸದಲ್ಲಿ ಅವನ ಮನಕ್ಕೆ ಶಾಂತಿ ದೊರೆಯುವ ಬಗೆಯೆಂತು? ಕೆಲಸಕ್ಕೆ ರಾಜೀನಾಮೆ ಕೊಟ್ಟ. ಒಂದೇ ಸವನೆ ಹತ್ತು ವರ್ಷ ಕಾಲ ಬರೆಯುವದರಲ್ಲಿ ಕಳೆದ. ಮೊದಲು ಅವನ ಬರೆಹಗಳನ್ನು ಯಾರೂ ಮನ್ನಿಸುತ್ತಿರಲಿಲ್ಲ. ಕಡೆಗೆ ಬರೆಯಲಿಕ್ಕೆ ಕಾಗದ ಕೊಳ್ಳಲಿಕ್ಕೆಕೂಡ ಹಣ ಇಲ್ಲದ ಸ್ಥಿತಿ ಬಂದಿತವನಿಗೆ! ಆದರೆ ಆ ಎದೆಗಾರ ಅದಕ್ಕೆ ಅಂಜಲಿಲ್ಲ ಅವನ ಸತತ ಪ್ರಯತ್ನದ ಫಲವಾಗಿ ಕಡೆಗೆ ಅವನೊಬ್ಬ ಪ್ರಸಿದ್ಧ ಸಾಹಿತಿಯಾದ. ಹೆಸರನ್ನು ಪಡೆದ; ಹಣವನ್ನೂ ಪಡೆದ! ಅವನು ಬೀದಿಯಲ್ಲಿ ಹಾಯ್ದು ಹೋದನೆಂದರೆ ಜನರು, "ಪ್ರಸಿದ್ಧ ಸಾಹಿತಿ ಮಿ. ಟ್ರಲೋಪ ಇವರೇ!" ಎಂದು ಬೆರಗುಗೊಂಡು ನೋಡುತ್ತಿದ್ದರಂತೆ. ಆಗ ಅವನ ಹೆಮ್ಮೆ ಉಕ್ಕಿ ಉಕ್ಕಿ ಬರುತ್ತಿತ್ತಂತೆ. ಯಾಕೆ ಬರಬಾರದು?"

"ಅವನ ಕಥೆ ಅದೇಕೋ ನನಗೆ ಬಹಳೇ ರುಚಿಸಿತು. ಈಗ ನಾನಾದರೂ ಇರುವದು ಅವನಿಗಿಂತ ಕೀಳು ಸ್ಥಿತಿಯಲ್ಲಿಯೇ ಅಲ್ಲವೇ? ನನ್ನ ಗುರಿಯಾದರೋ ನನ್ನಿಂದ ಮುಟ್ಟಲಸಾಧ್ಯವಾದದ್ದು. ಆದರೂ ಬ್ರೌನಿಂಗ ಕವಿ ಹೇಳಿರುವನಲ್ಲ–'Low aim and not failure is crime" ಎಂದು. ನನ್ನ ಗುರಿಯನ್ನು ಸಾಧಿಸಲು ಆಗದಿದ್ದರೂ ಅಷ್ಟೇ ಹೋಯ್ತು; ಅದರಲ್ಲಿಯೇ ನನ್ನ ಆತ್ಮವನ್ನಾದರೂ ತೂರಬಹುದು. ಆದರೆ ಅದನ್ನು ಮುಟ್ಟಲು ಯತ್ನಿಸದೆ ಎಂದಿಗೂ ಇರಲಾರೆ."

ಈ ಮಾತನ್ನು ಓದುತ್ತಿರುವಾಗಲೇ ಸುಮಿತ್ರಮ್ಮನಿಗೆ ಮೂರ್ತಿಯ ಮನದ ಕಲ್ಪನೆಯಾಯಿತು. ಅವನ ತತ್ವ, ಪ್ರತಿಫಲಕ್ಕಿಂತ ಯತ್ನ ದೊಡ್ಡದು; ಎಂದು. ಮುಂದಿನ ಕೆಲ ಪುಟಗಳನ್ನು ತಿರುವಿದಳು. ಮೂರ್ತಿ ಅದರಲ್ಲಿ ಎಷ್ಟೋ ದಿನದ ತನ್ನ ಅನುಭವಗಳನ್ನು ಬರೆದಿದ್ದ. ಮುಂದೆ ಒಂದೆಡೆ ಹೀಗೆ ಬರೆದಿತ್ತು.

"ಇಂದು ನನ್ನ ಹುಟ್ಟಿದ ದಿನ. ನಾನು ಈ ಭೂಮಿಯಲ್ಲಿ ಬಂದು ಸಂಪೂರ್ಣ ಇಪ್ಪತ್ತೆರಡು ವರ್ಷಗಳಾದವು. ಏನು ಮಾಡಿದೆ ಇಲ್ಲಿಬಂದು? ಚಿಕ್ಕಂದಿನಲ್ಲಿ ಚಕ್ಕಂದದಿಂದ ಬೆಳೆದು ದೊಡ್ಡವನಾದೆ. ಯಾವ ಕಟು ಅನುಭವವೂ ನನ್ನನ್ನು ಸೋಂಕಿರಲಿಲ್ಲ ಆಗ. ಮನೆಯಲ್ಲಿ ತಂದೆ ತಾಯಿ ಅಕ್ಕ ಎಲ್ಲರೂ ನನ್ನ ಸುಖವೇ ತಮ್ಮ ಗುರಿಯೆಂದು ತಿಳಿದಂತೆ ನೋಡಿಕೊಳ್ಳುತ್ತಿದ್ದರು. ಯಾವ ತೊಂದರೆಯೂ ಇಲ್ಲದೆ ಬೆಳೆದೆ. ಪ್ರಾಥಮಿಕ ಶಾಲೆ ಮುಗಿಯಿತು, ಮ್ಯಾಟ್ರಿಕ ಪರೀಕ್ಷೆಯೂ ಆಯಿತು. ಕಾಲೇಜು ಸೇರಿದುದೂ ಆಯಿತು ಆ ದಿನಗಳೆಲ್ಲ ಚಿತ್ರಪಟದಲ್ಲಿಯ ದೃಶ್ಯಗಳಂತೆ ಒಂದರ ತರುವಾಯ ಇನ್ನೊಂದರಂತೆ, ಅಷ್ಟೊಂದು ತೀವ್ರವಾಗಿ ಗತಿಸಿದುವು. ಕಾಲೇಜು ಸೇರಿ ಮೊದಲ ವರ್ಷಕ್ಕೆ ಆರಂಬವಾಯಿತ್ತು, ಕಟು ಅನುಭವಗಳ ಹಿಡಿಸಲಾರದ ತುತ್ತುಗಳನ್ನು ನುಂಗಲಿಕ್ಕೆ. ಈಗಂತೂ ಆ ತುತ್ತು ಗಂಟಲಲ್ಲಿ ಸಿಕ್ಕು ಪ್ರಾಣ ಹಾರಿಹೋಗುವಂತಾಗಿದೆ. ಯಾವ ಕಾರಣವೂ ಇಲ್ಲದೆ ಕೇವಲ ಅನ್ಯರಿಗಾಗಿ, ತಂದೆಯವರು ಪ್ರಾಣ ನೀಗಿದರು. ಅದೂ ಎಂಥ ಮರಣ! ಹಾಳು ಬಾವಿಯಲ್ಲಿ ಬಿದ್ದು ಸಾಯಬೇಕೇ? ಯಾವ ಅಪರಾಧಕ್ಕಾಗಿ ಆ ಶಿಕ್ಷೆ? ಗೋಕುಲದಂತಿದ್ದ

ಮನೆ ಮಸಣದಂತಾಯಿತು. ತಂದೆಯೊಂದಿಗೆ ಮನೆಯ ಭಾಗ್ಯ ಅಡಗಿ ಹೋಯಿತು. ಅಷ್ಟಕ್ಕೇ ಮುಗಿಯಲಿಲ್ಲ. ತಂದೆ ಮತ್ತು ಸಂಪತ್ತನ್ನು ಕಸಿದುಕೊಂಡ ದೈವ ತಾಯಿಯನ್ನೂ ಕೊಂಡೊಯ್ದು ಸಂಪೂರ್ಣ ಪರದೇಶಿಯನ್ನಾಗಿ ಮಾಡಿತು. ತಂದೆಯ ಮರಣದ ಬಲವಾದ ಆಘಾತ ದಿಂದ ಹಾಸುಗೆ ಹಿಡಿದ ತಾಯಿ ಪುನಃ ಏಳಲಿಲ್ಲ! ಆಯಿತು ಸಂಪೂರ್ಣ ನಿರಾಶಮಯ ಜೀವನಕ್ಕೆ ಆರಂಭ."

"ಈಗ ನನ್ನ ನಿರಾಶಾಮಯ ಜೀವನದಲ್ಲಿ ಕಾಣುವ ಆಶಾ ದಾಯಕ ಕಿರಣವೆಂದರೆ ನನ್ನಕ್ಕ, ಎರಡನೆಯದು ನನ್ನ ವಿದ್ಯಾಭ್ಯಾಸ, ಎರಡೇ. ಇವನ್ನು ಬಿಟ್ಟರೆ ನನಗೆ ಯಾವುದೂ ಪ್ರಿಯವಾದುದಿಲ್ಲ; ಬೇಕಾಗಿಯೂ ಇಲ್ಲ........ನನ್ನಕ್ಕ! ಅವಳು ಎಂಥವಳೆಂದು ಬಾಯಿ ಮಾತಿನಲ್ಲಿ ಹೇಳುವದು ನನ್ನಿಂದಾಗದು. ಮಮತೆಯೇ ಮೂರ್ತಿವೆತ್ತ ಜೀವಿಯದು! ನನಗಾಗಿ ಅವಳು ಅನುಭವಿಸಿದ ತೊಂದರೆಗಳಿಗೇನೂ ಕೊರತೆಯಿಲ್ಲ. ಕೊನೆಗೆ ಅವಳಾದರೂ ತನ್ನ ಪತಿಯೊಡನೆ ಸುಖವಾಗಿರು ವಳಲ್ಲ! ಅಷ್ಟೇ ಸಾಕು."

ಮೂರ್ತಿ ತನ್ನಕ್ಕನನ್ನು ಅಷ್ಟೇಕೆ ನೆನೆಯುತ್ತಿರುವನೆಂಬುದು ಸುಮಿತ್ರಮ್ಮನ ಮನಕ್ಕೀಗ ಹೊಳೆಯಿತು. ಗಂಡಸರ ಹೃದಯ ಕಠಿಣ ವಾದುದು ಎಂದು ಜನ ಹೇಳುವದು. ಆದರೆ ಮೂರ್ತಿಯಲ್ಲಿ ಅವಳಕ್ಕನ ಸಲುವಾಗಿದ್ದ ಪ್ರೀತಿ? "ನನಗೂ ಇಂಥ ಒಬ್ಬ ಬಂಧುವಿದ್ದರೆ..." ಈ ವಿಚಾರ ಅವಳ ಮನದಲ್ಲಿ ತಾನೇ ತಾನಾಗಿ ಸುಳಿದು ಹೋಯಿತು. ಸುಮಿತ್ರಮ್ಮ ಮತ್ತೆ ಓದತೊಡಗಿದಳು.

"ಎಲ್ಲ ರೀತಿಯಿಂದಲೂ ನನ್ನ ಜೀವನವು ನಿರಾಶಾಮಯವಾಗಿ ದ್ದರೂ, ಒಂದು ವಿಷಯದಲ್ಲಿ ಮಾತ್ರ ದೈವ ಅನುಕೂಲವಾಗಿದೆಯೆಂದು ಹೇಳಬಹುದು; ಕಡಲೊಳಗೆ ಮುಳುಗುತ್ತಿರುವವನಿಗೆ ಒಂದು ಹುಲ್ಲು ಕಡ್ಡಿ ದೊರೆತರೂ, ಅದು ತನ್ನನ್ನು ತೇಲಿಸಿಕೊಂಡು ದಂಡೆಗೆ ಮುಟ್ಟಿಸ ಬಹುದೆಂದು ಅನ್ನಿಸುವಂತೆ ನನಗೆ ವಿದ್ಯಾಭ್ಯಾಸದ ಸಹಾಯ. ಮೊನ್ನಿನ ಜ್ಯೂನಿಯರ ಬಿ. ಎ. ಪರೀಕ್ಷೆಯಲ್ಲಿ ಕಾಲೇಜಕ್ಕೆ ನನ್ನದು ಮೊದಲನೆಯ ನಂಬರು ಬಂದಿದೆ. ತಿಂಗಳಿಗೆ ಇಪ್ಪತ್ತು ರೂಪಾಯಿ ಶಿಷ್ಯವೃತ್ತಿ ದೊರೆ

ಯುವದು. ಅಕ್ಕ ಇದನ್ನು ಕೇಳಿದಾಗ ಅದೆಷ್ಟು ಸಂತೋಷದಿಂದ ಕುಣಿಯಬಹುದು! ಇಂಟರದಲ್ಲಿ ಒಂದನೆಯ ತರಗತಿಯಲ್ಲಿ ಪಾಸಾದಾಗ ಅವಳೊಂದು ಪತ್ರ ಬರೆದಿದ್ದಳು—

‘ ಕೇವಲ ದುಡಿತಕ್ಕಾಗಿ ದೇಹ ತೆತ್ತಂತಾಗಿದೆ ನನ್ನ ಕೂಸು ಮೋರ್ಯಾ. ಜನ್ಮವಿತ್ತ ಪ್ರಭು ಸುಬುದ್ಧಿಯನ್ನಿತ್ತು, ಸಾಕಷ್ಟು ಶಕ್ತಿಯನ್ನು ದಯಪಾಲಿಸಿ ಹೀಗೆಯೇ ಪ್ರತಿ ವರ್ಷ ಆತನ ಉತ್ಕರ್ಷೆಯನ್ನು ಮಾಡುತ್ತ ಹೋಗಲಿ! ಅವನ ಅಕ್ಕನಾಗಿ ಮಾಡುವ ಹಾರೈಕೆ ಹುಸಿಹೋಗದಿರಲಿ !........ಮೋರ್ಯಾ, ಜೀವನದ ಎಲ್ಲ ಆಗು—ಹೋಗುಗಳನ್ನು ಹುರಿಗೊಳಿಸಿ ಹಗ್ಗ ಆಡುತ್ತಿರುವಿಯಾ ? ಆಡು. ಆದರೆ ಜೀವನದಲ್ಲಿ ಯಾವುದಕ್ಕೂ ಬೇಸರಿಯಬೇಡಪ್ಪಾ. ಪಾಲಿಗೆ ಬಂದುದೇ ಪಂಚಾಮೃತವಲ್ಲವೇ ? ಮನವು ನಿರ್ಬಲಗೊಳ್ಳದಿರಲಿ. ಅರ್ಥವಿಲ್ಲದ ವಿಚಾರಮಾಡಿ ಬಗೆಹರಿಯದ ಸಮಸ್ಯೆ ಬಿಡಿಸುವ ಸಾಹಸ ಮಾಡಿ ಭಾವನಾವಶನಾಗದಿರು. ಹಿಂದಿನದನ್ನು ನೆನೆಯದೆ, ಇಂದಿನದನ್ನು ನೋಡಿಯೂ ನೋಡದೆ, ಮುಂದಿನದನ್ನು ವಿಚಾರಿಸದರೂ ಮನಸ್ಸಿಗೆ ಹಚ್ಚಿಕೊಳ್ಳದೆ ಓಡು ನನ್ನ ಕೂಸಿಗೆ ದಣಿವಾಗದಿರಲಿ. ಸರಸತಿಯ ಬೆನ್ನಟ್ಟಿ ಲಕ್ಷ್ಮಿ ಬಂದಾಳು ! ಬರಲಿ, ಬಾರದಿರಲಿ, ಅಪಾರವಾದೀ ಬಾಳಕಡಲಲ್ಲಿ ಧೈರ್ಯದಿಂದ ಚುಕ್ಕಾಣಿ ಹಿಡಿದು, ನೌಕೆಯನ್ನು ನಡಿಸು. ನಡುವೆ ಗಡುತರ ತೆರೆ ಬಂದರೂ ನಿನ್ನ ಶಕ್ತಿಯು ಮುಂದೆ ಅದರಾಟ ನಡೆಯದಿರಲಿ !........ ಇದಕ್ಕೂ ಹೆಚ್ಚಿಗೆ ನಿನ್ನ ಈ ಬಡ ಅಕ್ಕ ಏನು ಹಾರೈಸಬಲ್ಲಳಪ್ಪಾ ? ತನು ಮತ್ತು ಧನಗಳಿಂದ ಸಹಾಯ ಮಾಡದಿದ್ದರೂ ಮನವು ಮಾತ್ರ ಯಾವಾಗಲೂ ನಿನಗಾಗಿಯೇ ಮೀಸಲಾಗಿದೆಯೆಂಬುದನ್ನು ಮಾತ್ರ ಮರೆಯದಿರು.... ’

ತಾಯಿಯಿಲ್ಲದಿದ್ದರೂ ಸೋದರ ಮಾವ ಇರಬೇಕೆಂದು ಜನ ಹೇಳುವದು. ಇಂಥ ಅಕ್ಕ ಅನರಿಗಾರಿಗೂ ದೊರೆತಿರಲಿಕ್ಕಿಲ್ಲ. ಅದು ಕಾರಣವೇ ಅವರು ಹಾಗೆ ಹೇಳುವದು. ನನ್ನಕ್ಕನಂಥ ಅಕ್ಕನನ್ನು ಪಡೆಯಲಿಕ್ಕೂ ‘ ಬೇಡಿ ’ ಬರಬೇಕು.... ”

ಓದುತ್ತಿರುವಂತೆಯೇ ಸುಮಿತ್ರಮ್ಮನ ಮನದಲ್ಲಿ ಒಂದು ಬಗೆಯ ಸಮಾಧಾನ ಆವರಿಸಿತು. ಅದರೊಂದಿಗೆ ಇನ್ನೂ ಓದಬೇಕೆಂಬ ಲವಲವಿಕೆಯೂ ಹೆಚ್ಚಿತು. ಆಗಲೇ ರಾತ್ರಿ ಹನ್ನೆರಡಾಗಲಿಕ್ಕೆ ಬಂದಿದ್ದಿತು. ಆದರೆ ಗಡಿಯಾರದ ಕಡೆಗೆ ಅವಳ ಲಕ್ಷ್ಯವೇ ಹೋಗಿರಲಿಲ್ಲ. ಮತ್ತೆ ಓದಲಾರಂಭಿಸಿದಳು. ಮೂರ್ತಿ ಒಂದೆಡೆಗೆ ಹೀಗೆ ಬರೆದಿದ್ದ.

"ಇತ್ತೀಚೆ ಜೀವನವು ಬಲು ಬೇಸರವಾಗುತ್ತಲಿದೆ. ಮುಂಜಾನೆಯಿಂದ, ಮಲಗಿಕೊಳ್ಳುವವರೆಗೂ ಯಂತ್ರದ ಚಕ್ರದಂತೆ ಬಿಡುವಿಲ್ಲದೆ ಬೇಸರವಿಲ್ಲದೆ ದುಡಿಯಬೇಕು. ಮುಂಜಾನೆ ಏಳು ಗಂಟೆಗೆ ಕಾಲೇಜಿಗೆ ಹೋಗಬೇಕಾದರೆ, ಕನಿಷ್ಠ ಐದು ಗಂಟೆಗಾದರೂ ಏಳಲೇಬೇಕು. ಪ್ರಾತರ್ವಿಧಿ, ಸ್ನಾನ ಮುಗಿಯುವದರಲ್ಲಿ ಆರು ಹೊಡೆಯುವುದು. ಚಹ ಕುಡಿದು ಸಾಯಕಲ್ಲು ಹತ್ತಿದರೆ ಕಾಲೇಜಕ್ಕೆ ಹೋಗುವದರೊಳಗಾಗಿ ಕಾಲೇಜ ಗಂಟೆಯಾಗಿರುವದು. ಸಂಪೂರ್ಣ ಆರು ಮೈಲು ಹೋಗಬೇಡವೇ? ಕಾಲೇಜು ಬಿಡುವದು ಹತ್ತೂವರೆಗೆ; ಆಫೀಸು ಆರಂಭ ಹನ್ನೊಂದಕ್ಕೆ. ಅರ್ಧ ತಾಸಿನಲ್ಲಿ ಖಾನಾವಳಿಗೆ ಹೋಗಿ 'ಗಣಗಪ' ತಿಂದು ಒಂದೂವರೆ ಮೈಲು ದೂರದಲ್ಲಿದ್ದ ಆಫೀಸು ಮುಟ್ಟಬೇಕು. ಐದು ನಿಮಿಷ ತಡವಾದರೆ ಮೇಲಿಸವರ ಕೆಟ್ಟಕಣ್ಣಿನ ಬಿರು ನೋಟಕ್ಕೆ ಗುರಿಯಾಗಬೇಕು. ಹೌದು. ಅವರದಾದರೂ ಏನು ತಪ್ಪು ? ಕೆಲಸಕ್ಕೆ ಇಟ್ಟುಕೊಂಡುದುದೇ ದೊಡ್ಡ ಉಪಕಾರವಾಗಿದೆ. ಸಂಜೆಗೆ ಆಫೀಸು ತೀರಿಸಿಕೊಂಡು ಕೋಣೆಗೆ ಬರುವಷ್ಟರಲ್ಲಿ ಏಳು ಹೊಡೆದು ಹೋಗಿರುತ್ತದೆ. ಸಂಜೆಯ ಕೂಳು ಸಹಿತ ಬೇಡ ಎನ್ನುವಷ್ಟು ಬೇಸರ ಬಂದು ಬಿಡುತ್ತದೆ. ಎರಡು ಮೂರು ಕಪ್ಪು ಚಹ ಕುಡಿದಾಗ ಮಾತ್ರ ಏನೋ ತುಸು ಹಗುರಾದಂತೆನಿಸುವದು. ರಾತ್ರಿ ತಾಸರ್ಧ ತಾಸು ಕೂಡ ಓದುವದಕ್ಕೆ ಆಗುವದಿಲ್ಲ. ಈ ಎರಡು ವರ್ಷದಿಂದಲೂ ಇದೇ ಹಣೆಬರಹ. ಆದರೆ ಈ ವರ್ಷವೂ ಹೀಗೆಯೇ ಸಾಗಿದರೆ ನಡೆಯದು. ಬಿ.ಎ. ಮೊದಲನೆಯ ತರಗತಿಯಲ್ಲಿ ಬರಬೇಕೆಂಬ ನನ್ನ ಗುರಿ 'ಗುರಿ'ಯಾಗಿಯೇ ಉಳಿಯಬೇಕಾಗುವದು. ಆದರಲ್ಲಿಯೂ ಅರ್ಥ ಶಾಸ್ತ್ರವನ್ನು ಮುಖ್ಯ ವಿಷಯವನ್ನಾಗಿ

ತೆಗೆದುಕೊಂಡು ಮೊದಲನೆಯ ತರಗತಿಯಲ್ಲಿ ಬರುವುದು ಬಲು ಕಠಿಣವಂತೆ; ಅಂತೆ ಯಾಕೆ, ಈಗ ನನಗೇ ಕಂಡುಬರುತ್ತಿದೆಯಲ್ಲ! ಏನೇ ಆದರೂ ಅದನ್ನು ಸಾಧಿಸುವವರೆಗೆ ಮನಕ್ಕೆ ಸಮಾಧಾನ ದೊರೆಯಲಾರದು. ಆದರೆ ಈ ರೀತಿ ಜೀವನ ತೆಗೆಯುವದು ಈ ವರ್ಷವಂತೂ ಬಹಳೇ ಕಠಿಣತರವಾಗುತ್ತಲಿದೆ. ಸುಮ್ಮನೇ ಅಷ್ಟಕ್ಕೇ ವಿದ್ಯಾಭ್ಯಾಸ ಮುಗಿಸಿ, ಯಾವುದಾದರೂ ಕೆಲಸ ಹಿಡಿದುಕೊಂಡು ಇದ್ದು ಬಿಟ್ಟಿದ್ದರೆ ಇಷ್ಟು ತ್ರಾಸಾಗುತ್ತಿರಲಿಲ್ಲ. ಈ ಕೆಲಸ-ಕಾಲೇಜು ಎರಡನ್ನೂ ಮಾಡುವವರ ಮುಖ ನೋಡಬಾರದು ಎಂದೆನಿಸುತ್ತಲಿದೆ. ಆದರೆ ಹಾಗೆ ಮಾಡಲಿಕ್ಕೆ ನನ್ನಿಂದ ಎಂದಿಗೂ ಅಸಾಧ್ಯ. ಆಕಾಂಕ್ಷೆಯೊಂದಿದೆಯಲ್ಲ!"

ತನ್ನ ಜೀವನವೇ ಕಷ್ಟಮಯ ಜೀವನವೆಂದು ತಿಳಿದುಕೊಂಡ ಸುಮಿತ್ರಮ್ಮನಿಗೆ, ಮೂರ್ತಿಯ ದಿನಚರಿಯನ್ನು ಓದಿ ತನ್ನದು ಅವನ ದೃಷ್ಟಿಯಿಂದ ಏನೂ ಅಲ್ಲ, ಎನ್ನಿಸದಿರಲಿಲ್ಲ. ಆಗ ಅಷ್ಟು ಕಷ್ಟ ಸಹಿಸಿದುದೇ ಆ್ಯನಿಮಿಯಾದಂಥ ಉಗ್ರ ಬೇನೆಗೆ ಕಾರಣವಾಯಿತೆಂದು ಒಮ್ಮೆಲೇ ಅವಳಿಗೆ ಹೊಳೆಯದಿರಲಿಲ್ಲ. "ಏನೇ ಆದರೂ ಒಮ್ಮೆ ಮೂರ್ತಿಗೆ ಬೇಗ ಗುಣವಾಗಲಿ. ಇಷ್ಟು ದಿನ ಕಷ್ಟ ಅನುಭವಿಸಿದ ಜೀವಕ್ಕೆ ಇನ್ನು ಸುಖ ದೊರೆಯಲಿ" ಎಂದುಕೊಂಡಳು ಮನದಲ್ಲಿಯೇ! ಹೊರಗೆ ಗಾಳಿ ಸುಯ್ಯೆಂದು ಬೀಸುತ್ತಲಿತ್ತು. ದೂರದಲ್ಲಿ ನಾಯಿಯೊಂದು ಕೆಟ್ಟ ಧ್ವನಿಯಿಂದ ಬೊಗಳುತ್ತಲಿತ್ತು. ಆ ಭಯಂಕರ ಗಾಳಿಯಲ್ಲಿ ಅದರ ಕಿರುಚುವ ಧ್ವನಿ ತೇಲಿಕೊಂಡು ಬಂದು ಸುಮಿತ್ರಮ್ಮನ ಕಿವಿಯಲ್ಲಿ ಹೊಕ್ಕಾಗ, ಒಮ್ಮೆಲೇ ಗಡಗಡನೆ ನಡುಗಿದಳು. ಏನೋ ಒಂದು ತರದ ಭಯವಾದಂತಾಯಿತು. ವಿರಾಮ ಕುರ್ಚಿಯಲ್ಲಿಂದ ಎದ್ದು ಹೋಗಿ ಕಾಟಿನ ಮೇಲೆ ಒರಗಿಕೊಂಡು, ಮತ್ತೆ ಪುಟಗಳನ್ನು ಮಗುಚ ತೊಡಗಿದಳು. ಅದೆಷ್ಟೋ ಪುಟಗಳ ನಂತರ ಹೀಗೆ ಬರೆದಿತ್ತು—

"ಈಗ ನಾಲ್ಕು ದಿನಗಳಿಂದ ಆಫೀಸಿಗೂ ಹೋಗಲಿಲ್ಲ. ಕಾಲೇಜಿಗೂ ಹೋಗಲಿಲ್ಲ. ಮೈಯಲ್ಲಿ ಸರಿಯಾಗಿಲ್ಲ. ಜ್ವರ ಬಂದಿದ್ದವು. ಈಗ ಸುಮಾರು ಎರಡು ತಿಂಗಳಾಯ್ತು, ದಿನಾಲು ಸಾಯಂಕಾಲವಾಯಿತೆಂದರೆ ಭಯಂಕರವಾದ ತಲೆನೋವು ಸುರುವಾಗುವದು. ತಲೆ ಎಲ್ಲಿ

ಸೀಳಿ ಹೋಗುವದೋ ಎನ್ನುವಂತಾಗುವದು. ಸಾಯಂಕಾಲ ಊಟವೇ ಹೋಗುವದಿಲ್ಲ. ಆಫೀಸಿನಿಂದ ಮನೆಗೆ ಬರುವದೇ ತಡ, ಹಾಸುಗೆಯಲ್ಲಿ ಉರುಳುವಂತಾಗುವದು. ಮಲಗಿಕೊಂಡರೆ ನಿದ್ರೆಯೂ ಚೆನ್ನಾಗಿ ಹತ್ತುವದಿಲ್ಲ. ಸಾವಿರಾರು ವಿಚಾರಗಳು ಬಂದು ತಲೆಯನ್ನು ಮುತ್ತುವವು. ಪರೀಕ್ಷೆಗೆ ಇನ್ನು ಕೇವಲ ಮೂರುವರೆ ತಿಂಗಳು ಉಳಿದಿವೆ. ಅಭ್ಯಾಸವಂತೂ ಏನೂ ಆಗಿಲ್ಲ. ಆದರೂ ಮನೋಧೈರ್ಯವಿದೆ, ಇಷ್ಟೇ ಅವಧಿಯಲ್ಲಿಯೇ ಕೂಡ ಅಭ್ಯಾಸ ಸರಿಯಾಗಿ ಮಾಡಿದರೆ ಚೆನ್ನಾಗಿ ಗುಣಗಳನ್ನು ದೊರಕಿಸಬಹುದೆಂದು. ಆದರೆ ಶರೀರಕ್ಕೆ ಈಗಾಗಲೇ ಸಾಕಷ್ಟು ಶ್ರಮವಾಗುತ್ತಿದೆ. ಇನ್ನು ಹೆಚ್ಚಿಗೆ ಓದುವದರಲ್ಲಿ ಕಳೆದರೋ, ಏನಾದರೂ ಬೇನೆ ಗೀನೆ ಬಿದ್ದರೆ ಮುಂಬಯಿಯಂಥ ಈ ಪಟ್ಟಣದಲ್ಲಿ ಯಾರು ಕೇಳಬೇಕು ನನ್ನನ್ನು? ಆ ಮೇಲೆ ನನ್ನ ಗುರಿ....? ಹೀಗೆಯೇ ಏನೇನೋ ವಿಚಾರಗಳು."

"ಮುಂಜಾನೆ ಹಾಸುಗೆಯಿಂದ ಏಳುವಾಗ ಬಾಯಿಯೆಲ್ಲ ಕಹಿಯಾದಂತಾಗಿರುವದು. ಏನೂ ರುಚಿಸುವದಿಲ್ಲ. ಈ ದಿನ ಡಾಕ್ಟರರು ಹೇಳಿದರು, " Be careful. ಮುಂದೆ ತ್ರಾಸಾದೀತು ಮೈಯಲ್ಲಿ ರಕ್ತ ತೀರ ಕಡಿಮೆಯಾಗಿದೆ. ದಿನಾಲು ಒಂದೇ ಹೊತ್ತು ಊಟ ಮಾಡಿದುದರ ಪರಿಣಾಮವೇ ಇದು. ಹೆಚ್ಚಿಗೆ strain ತೆಗೆದುಕೊಳ್ಳಬೇಡಿರಿ...." ಎಂದು ಹೌದು. ತ್ರಾಸು ತೆಗೆದುಕೊಳ್ಳುವದು ಯಾರಿಗೆ ಬೇಕು? ಆದರೆ ಬೇಡವೆಂದರೆ ಅದನ್ನು ಬಿಡಲಿಕ್ಕೆ ಸಾಧ್ಯವಾದೀತೇ?

ಅಂತೂ ಏನೂ ತಿಳಿಯದಂತಾಗಿದೆ "

ಸುಮಿತ್ರಮ್ಮ ಪುಟ ತಿರುವಿದಳು. ಮುಂದೆ ಕೆಲವು ಪುಟಗಳಲ್ಲಿ ಏನನ್ನೂ ಬರೆದಿರಲಿಲ್ಲ. ಅವನು ಯಾಕೆ ಹಾಗೆ ಬಿಟ್ಟಿರಬಹುದೆಂದು ಅವಳಿಗೆ ತೋಚಲಿಲ್ಲ. ಮುಂದೆ ಒಂದೆಡೆ ಬರೆದಿತ್ತು.

"ಇತ್ತೀಚೆ ಬರೆಯುವದೇ ಆಗಿಲ್ಲ. ಸುಮಾರು ಎರಡು ತಿಂಗಳಾದರೂ ಆಗಿರಬಹುದು. ಅದರ ನೆನಪಿಗೆಂದೇ ನಡುವೆ ಕೆಲವು ಹಾಳೆಗಳನ್ನು ಬಿಟ್ಟುಬಿಟ್ಟಿದ್ದೇನೆ.

ಪರೀಕ್ಷೆಗೆ ಸುಮಾರು ಒಂದು ತಿಂಗಳು ಉಳಿದಿದೆ. ಆಫೀಸಿನಲ್ಲಿ ರಜೆ ಕೇಳಿದೆ. "ಸಿಗಲಾರದು. ಪರೀಕ್ಷೆಯ ಕಾಲಕ್ಕೆ ಎಂಟು ದಿನಗಳ ವರೆಗೆ ಮಾತ್ರ ದೊರೆಯಬಹುದು." ಎಂದು ಉತ್ತರ ಬಂತು. ಹಾಗೆ ಉತ್ತರ ಬರಬಹುದೆಂದು ಮೊದಲಿಗೇ ವಿಚಾರ ಬಂದಿತ್ತು. ಅದಕ್ಕಾಗಿಯೇ ರಾತ್ರಿ ಹೆಚ್ಚು ಓದುವದನ್ನು ಪ್ರಾರಂಭ ಮಾಡಿದ್ದೇನೆ. ಮುಂಜಾನೆ ಬೇಗ ಏಳು ವದು ನನಗೆ ಎಂದಿಗೂ ಸಾಧ್ಯವಾಗಿಲ್ಲ; ಆಗಲಾರದು. ಕಾರಣ ರಾತ್ರಿ ವೇಳೆಯಲ್ಲಿಯೇ ಒಂದೋ ಎರಡೋ ಹೊಡೆಯುವ ತನಕ ಓದುತ್ತೇನೆ. ಆದರೆ ಮುಂಜಾನೆ ಏಳುವಾಗ ಮಾತ್ರ ಹಾಸಿಗೆಯಲ್ಲಿ ಲೋಕಚುಂಬಕದಂಥ ಒಂದು ಶಕ್ತಿ ನನ್ನ ಶರೀರವನ್ನು ಜೋರಿನಿಂದ ಎಳೆದುಕೊಂಡಂತೆ ಭಾಸ ಗುವದು. ಎದ್ದಾಗ ಕಾಲುಗಳಲ್ಲಿ ತ್ರಾಣವೇ ಇಲ್ಲವೇನೋ ಎಂದೆನ್ನಿಸುವುದು. ಆದರೂ ಮನಸ್ಸಿಗೆ ಸಂಪೂರ್ಣ ಸಮಾಧಾನವಿದೆ, ನನ್ನ ಕರ್ತವ್ಯವನ್ನು ನಾನು ಮಾಡುತ್ತಿರುವೆನಲ್ಲ, ಎಂದು. ನನ್ನ ಗುರಿಯನ್ನು ಮುಟ್ಟಬಹುದು. ಇಲ್ಲವೆ ಬಿಡಬಹುದು. ಆದರೆ ಮುಟ್ಟುವೆನೆಂದೇ ಅದೇಕೋ ಎನ್ನಿಸುತ್ತ ಲಿದೆ. ಏನಾಗುವದೋ ಅದಾರು ಬಲ್ಲರು.?

ಆದರೆ ಶರೀರ ಮಾತ್ರ ತೀರ ಸೋತಿದೆ. ಇಂದು ತೂಕ ಮಾಡಿ ಸಿದೆ, ಕೇವಲ ೮೨ ಪೌಂಡು! ಮೊದಲು ಅಂದರೆ ಕಳೆದ ವರ್ಷ ನನ್ನ ತೂಕ ೧೨೦ ಪೌಂಡು ಇತ್ತು. ಅದರ ಸಲುವಾಗಿ ನನಗೆ ಅಷ್ಟೇನೂ ಕೆಡ ಕೆನಿಸುವದಿಲ್ಲ. ಪರೀಕ್ಷೆ ಮುಗಿದ ಮೇಲೆ ಹುತ್ತೆ ಶರೀರ ಪ್ರಕೃತಿಯನ್ನು ಸುಧಾರಿಸಿಕೊಳ್ಳಬಹುದಲ್ಲ? ಅಲ್ಲಿಯ ವರೆಗೆ ಈಗಿದ್ದ ಸ್ಥಿತಿಯಲ್ಲಿಯೇ ಉಳಿ ದರೂ ಸಾಕು!"

ಸುಮಿತ್ರಮ್ಮ ಮರಮರನೆ ಮರುಗಿದಳು. "ಎಷ್ಟು ಹುಚ್ಚುತನ ವನ್ನು ಮೂರ್ತಿ ಮಾಡಿದನಲ್ಲ! ಪ್ರಕೃತಿಯ ಕಡೆಗೆ ಅಷ್ಟು ನಿರ್ಲಕ್ಷ್ಯ ಮಾಡಬಾರದಾಗಿತ್ತು. ಅವನ ಗುರಿ ಒಂದೆಡೆ ಉಳಿಯಲಿ, ದೇಹದಲ್ಲಿ ಜೀವವಾದರೂ ಉಳಿಯಬೇಕಲ್ಲವೇ?" ಹೀಗೆ ಅವಳು ಯೋಚಿಸು ತ್ತಿದ್ದಂತೆಯೇ ಅದಾವುದೋ ಒಂದು ಪಕ್ಷಿಯು ಕೆಟ್ಟ ಧ್ವನಿಯಿಂದ ಕೂಗಿತು. ಅದನ್ನು ಕೇಳಿ ಸುಮಿತ್ರಮ್ಮನಿಗೆ ನಡಿರೆದ್ದಿತು. ಅವಳ ಭಾವಿಕ ತನದ ವಿಚಾರ ಒಮ್ಮೆಲೇ ಮನದಲ್ಲಿ ಸುಳಿಯಿತು. "ಗೂಗೆಯೇಕೆ

ಒದರಿತೋ, ಅನಿಷ್ಟ!'' ಎಂದು ಮುಂದೆ. ಸುಮಾರು ಐದು ನಿಮಿಷ ಗಳಾದರೂ ಅವಳಿಂದ ಓದಲಾಗಲಿಲ್ಲ.

ಮುಂದಿನ ಪುಟದಲ್ಲಿ ಕೇವಲ ಎರಡೇ ವಾಕ್ಯಗಳಿದ್ದುವು.

" ನಾಳೆಯಿಂದ ನಮ್ಮ ಪರೀಕ್ಷೆಗೆ ಆರಂಭ. ದೇಹದಲ್ಲಿದ್ದ ಸಾವಿರ ಪಾಲು ಆತ್ಮಶಕ್ತಿ ಹೃದಯದಲ್ಲೀಗ ಬಂದಿದೆ. "

ತರುವಾಯ ಮೊನ್ನಿನ ದಿನಾಂಕವನ್ನೇ ಕಾಣಿಸಿ ಮೂರ್ತಿ ಬರೆದಿದ್ದ.

" ನಾನು ಬರೆಯುವದನ್ನು ಬಿಟ್ಟು ಸುಮಾರು ನಾಲ್ಕು ತಿಂಗ ಳಾಯ್ತು. ಬರೆಯುವದಾದರೂ ಏನು ಮತ್ತು ಏತಕ್ಕಾಗಿ ? ಎಲ್ಲ ಉತ್ಸಾ ಹವೂ ಆ ದಿನದಿಂದ ಕುಗ್ಗಿ ಹೋಗಿದೆ. ಆ ದಿನ, ಪರೀಕ್ಷೆಯ ಕೊನೆಯ ದಿನ. ಕೊನೆಯ ಪೇಪರು ಬರೆಯುತ್ತಿದ್ದೆ. ಮುಗಿಯಲಿಕ್ಕೆ ಸುಮಾರು ಅರ್ಧ ತಾಸು ಇದ್ದಿರಬಹುದು. ಒಮ್ಮೆಲೇ ಎದೆಯಲ್ಲ ಏನೋ ಒಂದು ತರಹ ಭಯಂಕರ ವೇದನೆ ಆರಂಭವಾಯಿತು. ಕಡಿಮೆಯಾದೀತೆಂದು ಎಷ್ಟು ತಡೆದರೂ, ಇನ್ನೂ ಹೆಚ್ಚುತ್ತಲೇ ಹೋಯಿತು. ತಲೆ ಗರಗರನೆ ತಿರುಗಿದಂತಾಯಿತು. ಗಂಟಲು ಒಣಗಿತು. ಕಣ್ಣಿಗೆ ಏನೂ ಕಾಣ ದಂತಾಯಿತು. ನಾನು ಕುಳಿತದ್ದು ಎಲ್ಲಿ, ಕೈಯಲ್ಲೇನಿದೆ ತಿಳಿಯದೆ ಹೋಯಿತು. ಏನೋ ಒಂದು ಸಂಕಟವಾಗುತ್ತಲಿದೆಯೆಂದು ಗೊತ್ತಾ ಯಿತು. ಆದರೆ ಏನೂ ತಿಳಿಯಲಿಲ್ಲ. ಯಾರಿಗೂ ಬಾಯ್ದೆರೆದು ಹೇಳ ಲಿಕ್ಕೂ ಬರಲಿಲ್ಲ. ಬಹುತರವಾಗಿ ನಾನು ಕುಳಿತಲ್ಲಿಂದ ಎದ್ದು ನಿಂತೆನೆಂದು ನೆನಪಿದೆ. ಆದರೆ ನಿಲ್ಲಲಾಗಲಿಲ್ಲ. ಜೋಲಿ ಹೋಯಿತು- ಬಿದ್ದೆ ! ಮುಂದೇನಾಯಿತೋ ತಿಳಿಯದು. ಆದರೆ, ನಾನು ಕಣ್ಣು ತೆರೆದಾಗ ಮಾತ್ರ ಎದುರಿಗೆ ಬಿಳಿಯ ವಸ್ತ್ರವನ್ನುಟ್ಟ ಹೆಂಗುಸೊಬ್ಬಳು ನಿಂತಿದ್ದಳು. ಅವಳೇ ನರ್ಸು ಸುಮಿತ್ರಮ್ಮ. ಇನ್ನೂ ನೆನಪಿದೆ, ಅವಳು ನನ್ನನ್ನು ಕೇಳಿದ್ದಳು. " ಈಗ ಸಮಾಧಾನವಿದೆಯೇ '' ಎಂದು. ಏನು ಹೇಳಲಿಕ್ಕೂ ತಿಳಿಯಿದೆ. ಗೋಣು ಮಾತ್ರ ಅಲುಗಾಡಿತ್ತು.

ಅಂದಿನಿಂದ ಪ್ರಾರಂಭವಾಯ್ತು, ಈ ಹಾಸ್ಪಿಟಲ ವಾಸಕ್ಕೆ. ಮೈಯಲ್ಲಿ ರಕ್ತವಿಲ್ಲವಂತೆ, ಎದೆಯಲ್ಲಿ ನೋವು ಬೇರೆ. ಇದೆಲ್ಲವೂ ಕಳೆ

ದೆರಡು ವರ್ಷ ಬಹಳೇ Strain ತೆಗೆದುಕೊಂಡುದರ ಪರಿಣಾಮವಂತೆ. ಗುಣವಾಗಲಿಕ್ಕೆ ಕನಿಷ್ಟ ನಾಲ್ಕೈದು ತಿಂಗಳಾದರೂ ಬೇಕಂತೆ!

ಮುಂದೆ ಎರಡು ದಿನಗಳ ತರುವಾಯ ಅಕ್ಕ ಮತ್ತು ಭಾವ ಬಂದಿದ್ದರು. ಅಕ್ಕನನ್ನು ನೋಡಿ ಅಳುವು ತಡೆಯಲಿಲ್ಲ. "ಅಕ್ಕಾ" ಎಂದು ಕಿರುಚಿಕೊಂಡು ಅವಳ ತೊಡೆಯಲ್ಲಿ ಮುಖವಿಟ್ಟು ಅದೆಷ್ಟೋ ಕಾಲ ಅತ್ತಿದ್ದೆ. ಅವಳಿಗೂ ಮಾತೇ ಬರಲಿಲ್ಲ. ಇಬ್ಬರೂ ಸುಮಾರು ಅರ್ಧ ತಾಸಾದರೂ ಹಾಗೆಯೇ ಕಳೆದಿರಬೇಕು. ಕಡೆಗೆ . ಅಕ್ಕ ಮಿಡುಕಿದ್ದಳು. "ಮೋರ್ಯಾ, ಎಂಥ ಸ್ಥಿತಿ ಬಂದಿತಪ್ಪಾ. ನಿನಗೆ ಹೇಗೆ ಬೇಗ ಗುಣವಾದೀತಪ್ಪಾ! ಅದೆಷ್ಟು ದೇವರಿಗೆ ಹರಕೆ ಹೊರಲಿ?" ಎಂದು. ನನ್ನಕ್ಕನ ಹೃದಯ ಬಲು ಕೋಮಲ. ಕೋಮಲವೆಂದರೆ ಹೇಗೆಂಬುದನ್ನು ಹೇಗೆ ಹೇಳಲಿ? ಹೇಳಲಿಕ್ಕಾಗದು. ಕೆಲವರು ಅದಕ್ಕೆ 'ಹೆಣ್ಣುಗರುಳು' ಎನ್ನುವರು. ಆದರೆ ಅಕ್ಕನದು ಹೆಣ್ಣುಗರುಳುಗಳಲ್ಲಿಯ ಹೆಣ್ಣುಗರುಳು. ಅವಳು ಬಹಳೇ sensitive. ಕಾರಣ ಅವಳ ಆವೇಗವನ್ನು ಕಡಿಮೆ ಮಾಡುವದಕ್ಕಾಗಿ ನಾನೇ ಅವಳಿಗೆ ಮತ್ತೆ ಸಮಾಧಾನ ಹೇಳಿದ್ದೆ, "ನನಗೇನಾಗಿದೆ? ಹದಿನೈದು ದಿನಗಳಲ್ಲಿ ನಿನ್ನ ಮೋರ್ಯಾ ಮತ್ತೆ ದುಂಡು ಹೋರಿಯಂತಾಗುವನು. ಹುಚ್ಚಿಯಂತೆ ಹಾಗೇಕೆ ಮಾಡುವಿ?" ಎಂದು.

ಅಕ್ಕ ಮೇಲಿಂದ ಮೇಲೆ ಬಂದು ಹೋಗುತ್ತಿದ್ದಳು. ಅವಳನ್ನು ಕಂಡಾಗ ಮನಕ್ಕೆ ಸಂಪೂರ್ಣ ನೆಮ್ಮದಿ. ಈಗ ಸುಮಾರು ೧೫ ದಿನಗಳ ಮೊದಲೊಮ್ಮೆ ಅಕ್ಕ ಬಂದಾಗ, ಅವಳಿಗೇನೆನ್ನಿಸಿತೋ ಏನೋ, "ಹುಮಾಯೂನನ ಕತೆಯಂತೆ ಒಬ್ಬರ ಬೇನೆಯನ್ನು ಇನ್ನೊಬ್ಬರು ತೆಗೆದುಕೊಳ್ಳಲು ನಿಜವಾಗಿಯೂ ಶಕ್ಯವಾದೀತೇ? ಎಂದು ನಾನು ಯಾವಾಗಲೂ ಯೋಚಿಸುತ್ತಿರುವದು." ಎಂದು ಉಸುರಿದ್ದಳು. ಆದರೆ ನನ್ನ ಬೇನೆ ಅವಳಿಗೆ ಬಂದರೆ ಏನು ತಾನೆ ಉಪಯೋಗ? ಅವಳಿಲ್ಲದ ಮರುದಿನ ನನ್ನ ಸ್ಥಿತಿ ಏನಾದೀತು? ಛೀ, ಇಂಥ ಇಂಥ ವಿಚಾರವೇ ಬೇಡ. ಆದರಂತೇ ನಾನು ಒಂದು ವೇಳೆ ಈ ಬೇನೆಯಿಂದ ಪಾರಾಗದಿದ್ದರೆ, ಪಾಪ ಅವಳ ಗತಿ ಏನು? ಒಬ್ಬರಿಲ್ಲದೆ ಇನ್ನೊಬ್ಬರು ಇರುವದು ತೀರ ಅಶಕ್ಯ. ನನಗಾಗಿ ಅಲ್ಲದಿದ್ದರೂ ಅವಳಿಗಾಗಿಯಾದರೂ ನಾನು

ಇರಲೇಬೇಕು; ಅದರಂತೆ ನನಗಾಗಿ ಅವಳು ಇರಲೇಬೇಕು. ಇದೆಲ್ಲವೂ ನಮ್ಮ ಮನದಾಶೆ. ಆದರೆ....? ಈಗ ಇದು ಸಾಧ್ಯವೇ? ನಾನು ಈ ಘೋರ ಬೇನೆಯಿಂದ ಪಾರಾಗಬಹುದೇ? ನನಗಂತೂ ಅಶಕ್ಯವೆಂದೇ ತೋರುವದು. ಸಾವಿಗಾಗಿ ನಾನು ಎಂದೂ ಹೆದರಿಲ್ಲ. ಹುಟ್ಟಿದವನು ಎಂದಾದರೂ ಒಂದು ದಿನ ಸಾಯಲೇಬೇಕು. ಆದರೆ ಇನ್ನೂ ಬಾಳ ಬೇಕೆಂದಿರುವಾಗ ಬಾಳಲಾರದೆ ಹೋಗುವೆನಲ್ಲಾ ಎಂಬ ಯೋಚನೆ ಮಾತ್ರ ಮನೋಸಾಗರದಲ್ಲಿಯ ದುಃಖದ ಪೆರ್ಪರೆಯನ್ನು ಇನ್ನೂ ಹಿರಿದನ್ನಾಗಿ ಮಾಡುತ್ತಲಿದೆ. ವ್ಯರ್ಥವಾಗಿ ಸಾಯಬೇಕಾಯಿತಲ್ಲಾ ಎಂದು ವಿಚಾರಿಸಿದಾಗ ಮಾತ್ರ ಬಲು ಪಶ್ಚಾತ್ತಾಪವಾಗುತ್ತಲಿದೆ. ನನ್ನ ಮಹತ್ವಾಕಾಂಕ್ಷೆಯ ಹಂಬಲವೇ ನನಗೆ ಮುಳುವಾಯಿತಲ್ಲ! ಆದರೂ ಒಮ್ಮೊಮ್ಮೆ ನಾನು ಈ ಬೇನೆಯಿಂದ ಪಾರಾಗಬಹುದೇನೋ ಎಂದೂ ಅನಿಸುವದು. ಆ ಆತ್ಮವಿಶ್ವಾಸದ ಬಲದಿಂದಲೇ ಬದುಕಿದರೆ ಬಾಳ ಬೇಕು.

ಈಗೆರಡು ದಿನಗಳಿಂದಂತೂ ಮನಸ್ಸಿನಲ್ಲಿ ಏನೇನೋ ವಿಚಾರಗಳು ಬರುತ್ತಲಿವೆ. ರಾತ್ರಿಯಲ್ಲಿ ಏನೇನೋ ಅಂಜಿಕೆ ಬರುವಂಥ ಕನಸುಗಳು. ನನಗೆ ಸಹಸಾ ಕನಸು ಬೀಳುವದು ತೀರ ಕಡಿಮೆ. ಬಿದ್ದರೂ ಮರುದಿನ ನೆನಪೇ ಉಳಿದಿರುವದಿಲ್ಲ. ಆದರೆ ನಿನ್ನೆಯ ಕನಸು ಮಾತ್ರ ಇನ್ನೂ ಸಂಪೂರ್ಣ ನೆನಪಿದೆ. ಅದು ಎಂದಿಗೂ ಮರೆಯದೇನೋ ಎಂದೂ ಅನಿಸುತ್ತಲಿದೆ.

....... ಅಪಾರ ಸಮುದ್ರ. ದಂಡೆಯಲ್ಲಿ ಅದೆಷ್ಟೋ ಜನರೊಂದಿಗೆ ನಾನೂ ಅಕ್ಕನೂ ಕುಳಿತು ಊಟ ಮಾಡುತ್ತಿದ್ದೆವು. ಅಂಥ ರುಚಿಯಾದ ಊಟ ವಾಸ್ತವ ಪ್ರಪಂಚದಲ್ಲಿ ಉಂಡದ್ದು ಈಗ ನಾಲ್ಕಾರು ವರ್ಷಗಳ ಹಿಂದೆ ಮಾತ್ರ. ನಗುತ್ತ ಕೆಲೆಯುತ್ತ ಹಾಗೇ ಕುಳಿತಿದ್ದೆವು. ಒಮ್ಮೆಲೇ ಯಾರೋ ಇಬ್ಬರು ಕಲ್ಲಿದ್ದಲಿಯನ್ನು ನಾಚಿಕೆಗೀಡು ಮಾಡುವ ಕಪ್ಪುಬಣ್ಣದ ಟೊಣಪರು ಬಂದವರೇ ನನ್ನನ್ನು ಒದೆದು ದೂರ ಕೆಡವಿ, ನನ್ನಕ್ಕನನ್ನು ಎತ್ತಿಕೊಂಡು ಒಂದು ಡೋಣಿಯಲ್ಲಿ ಕೂಡ್ರಿಸಿಕೊಂಡು ಹೊರಟರು. ಅಕ್ಕ ಅಲ್ಲಿ ಚೀರುತ್ತಿದ್ದಳು; ಕಾಲು ಮುರಿದು

ಏಳಲಿಕ್ಕೂ ಬಾರದೆ ಇಲ್ಲಿ ನಾನು ಚೀರುತ್ತಿದ್ದೆ! ಉಳಿದವರು ನಮಗೆ ಸಹಾಯ ಮಾಡುವದರ ಬದಲು, ನೋಡಿ ನಗುತ್ತಿದ್ದರು, "ದೇಶಕ್ಕೆ ಜೋರತಾಗಿ ಅಕ್ಕ-ತಮ್ಮ ಇವರಾಗಿದ್ದಾರೆ!" ಎಂದು. ಆ ವಿಕಟ ಹಾಸ್ಯ ನೋವಿನ ಮೇಲೆ ಎಳೆದ ಬರೆಯಂತಿತ್ತು. ಅದಾವುದೋ ಆವೇಗ ಮೈಯಲ್ಲಿ ಬಂದು ಅಕ್ಕನನ್ನು ಬಿಡಿಸಲೆಂದು ಎದ್ದೆ. ಅರ್ಧ ಏಳುತ್ತಿದ್ದಂತೆಯೇ ಮುಗ್ಗರಿಸಿಕೊಂಡು ಕುಕ್ಕರಿಸಿದೆ. ಬೆನ್ನು ಮುರಿದಂತಾಯ್ತು. ಚಿಟ್ಟನೇ ಚೀರಿದೆ...........ಅಷ್ಟರಲ್ಲಿ ಒಮ್ಮೆಲೇ ಎಚ್ಚರಾಯ್ತು! ನಿಜವಾಗಿಯೂ ಬೆನ್ನೆಲುಬು ಮುರಿದಿದೆಯೇನೋ ಎನ್ನುವಂತಾಗಿತ್ತು. ಬಹಳೇ ಹೆದರಿದ್ದೆ. ಎಚ್ಚರಾದಾಗ ಬೇಗನೇ ಮಗ್ಗುಲಾಗಲು ಕೂಡ ಬರಲಿಲ್ಲ! ಇಂಥ ವಿಚಿತ್ರ ಕನಸನ್ನು ನಾನೆಂದೂ ಕಂಡಿರಲಿಲ್ಲ. ಅದನ್ನು ನೆನೆದಾಗೊಮ್ಮೆ ಭಯವಾದಂತಾಗುವದು.

ಸುಮಿತ್ರಮ್ಮನ ಮನಸ್ಸು ಏನೋ ಒಂದು ತರಹ ಆಗಿಬಿಟ್ಟಿದ್ದಿತು. ಓದುತ್ತಿರುವಾಗ ಏನೇನೋ ವಿಚಾರಗಳು ಅವಳ ತಲೆಯನ್ನು ಮುತ್ತಿ, ಅವಳ ಮನವನ್ನು ಗಾಸಿ ಮಾಡಿದ್ದವು. ಇನ್ನು ಕೊನೆಯ ಒಂದೇ ಪುಟ ಉಳಿದಿತ್ತು. ಸುಮಿತ್ರಮ್ಮ ಓದುವದರಲ್ಲಿಯೇ ಮಗ್ನಳಾಗಿದ್ದಳು.

"ಇಂದು ಮುಂಜಾನೆಯಿಂದ ಅಕ್ಕನನ್ನು ಒಮ್ಮೆ ನೋಡಬೇಕೆಂದು ಮನವು ಬಹಳೇ ಹಂಬಲಿಸುತ್ತಲಿದೆ. ಒಮ್ಮೆ ಅವಳಿಂದ 'ಮೋರ್ಯಾ' ಎಂದು ಕರೆಯಿಸಿಕೊಳ್ಳಬೇಕು. ಆದರೆ....? ಅದು ಈಗ ಹೇಗೆ ಸಾಧ್ಯವಾಗಬೇಕು?....ಒಮ್ಮೆ ವಿಚಾರವೂ ಬಂದು ಹೋಯಿತು. ನಾನು ಇಲ್ಲಿ ಬಂದಾಗಿನಿಂದ ಸುಮಿತ್ರಮ್ಮನನ್ನು ಅಕ್ಕ ಎಂದು ಭಾವಿಸಿ ವರ್ತಿಸಿದ್ದೇನೆ. ಅವರಲ್ಲಿ ನನ್ನಕ್ಕನಲ್ಲಿರುವ ಅದೆಷ್ಟೋ ಗುಣಗಳಿವೆ. ಸುಮಿತ್ರಮ್ಮನೇ ನನ್ನಕ್ಕನ ಸ್ಥಾನದಲ್ಲಿದ್ದಾಳೆಂದೂ ಭಾವಿಸಿದ್ದೇನೆ. ಕಡೆಗೆ ಅವರಿಂದಾದರೂ.......! ಆದರೆ? ನಾನು ನನ್ನಕ್ಕನಂತೆ ಅವರನ್ನು ಕಂಡುದುದೇನೋ ನಿಜ. ಆದರೆ ಅವರು? ಹಾಗೆ ಕೇಳಿದರೆ 'ಹುಚ್ಚ' ಎಂದು ನಗಲೂ ಬಹುದಲ್ಲವೇ?"

ಸುಮಿತ್ರಮ್ಮನಿಗೆ ಒಮ್ಮೆಲೇ ಅರಿವಾಯಿತು—ಮೂರ್ತಿಯ ಮಾತಿನಲ್ಲಿ ಏನೋ ಒಂದು ಬಗೆಯ ಬೇಡಿಕೆ ಇತ್ತು; ಆದರೆ ಅದನ್ನು ತಿಳಿದುಕೊಳ್ಳುವದು ತನ್ನಿಂದಾಗಲಿಲ್ಲ ಎಂದು. ನಿಜವಾಗಿಯೂ ಸುಮಿತ್ರಮ್ಮನ ಹೃದಯ ಉಬ್ಬಿ ಬಂತು. "ಮೂರ್ತೀ, ನನಗೆ ನೀನು ಅಷ್ಟು ದೊಡ್ಡ ಸ್ಥಾನವನ್ನು ಕೊಡುವೆಯಾ? ಅದಕ್ಕೆ ನಾನು ಯೋಗ್ಯಳೇ? ನಾನೇ ಧನ್ಯಳು!" ಮಾತು ತಾನೇ ತಾನಾಗಿ ಉಸುರಿತು.

ಮತ್ತೆ ಓದತೊಡಗಿದಳು ಸುಮಿತ್ರಮ್ಮ.

"ಇಂದಿಗೆ ಈ ದಿನಚರಿಯನ್ನು ಬರೆಯುವದನ್ನೇ ಸಂಪೂರ್ಣವಾಗಿ ನಿಲ್ಲಿಸಬೇಕೆಂದಿದ್ದೇನೆ. 'ಏನೂ ಓದಲೂಬಾರದು, ಬರೆಯಲೂಬಾರದು' ಎಂದು ಡಾಕ್ಟರರ ಅಭಿಪ್ರಾಯವೂ ಇದೆ. ಅಂದ ಮೇಲೆ ಬೇಕೆಂತಲೇ ಯಾಕೆ ಬರೆಯುವದು? ಅಷ್ಟರಿಂದ ಜೀವ ಈ ದೇಹದಲ್ಲಿ ಉಳಿಯಲು ಶಕ್ಯವಾಗುತ್ತಿದ್ದರೆ ಅದನ್ನೂ ಬಿಟ್ಟರಾಯಿತು. ಮತ್ತು ಹಾಗೆ ಬರೆಯುವದಾದರೂ ಏನು ಉಳಿದಿದೆ? 'ಇಷ್ಟು ಸಾರೆ ಔಷಧ ಕುಡಿದೆ, ಔಷಧ ಕಹಿ ಇತ್ತು, ದಿನದಲ್ಲಿ ಇಷ್ಟು ಸಾರೆ ಎದೆ ನೋವು ಎದ್ದಿತು, ಇಷ್ಟು ಡಿಗ್ರಿ ಜ್ವರ ಇದ್ದುವು...' ಇವನ್ನೇ ಬರೆಯುವದೇ?.... ಈ ದಿನಚರಿಯನ್ನೇ ನನ್ನ ಹತ್ತರ ಇಟ್ಟುಕೊಳ್ಳಬಾರದೆಂದೂ ವಿಚಾರ, ಯಾಕಂದರೆ ಹತ್ತರ ಇದ್ದರೆ ಮತ್ತೆ ಬರೆಯಬೇಕೆಂದು ಮನಸ್ಸು ಅತ್ತ ಕಡೆಗೆ ಹರಿಯಬಹುದು. ಕಾರಣ ಸುಮಿತ್ರಮ್ಮನವರಿಗೆ ಒಪ್ಪಿಸಬೇಕೆಂದು ವಿಚಾರ ಮಾಡಿದ್ದೇನೆ. ಒಪ್ಪಿಸಲೋ ಬೇಡವೋ ಎಂದೂ ಮತ್ತೆ ವಿಚಾರವೇ. ಅವರೇನೇ ತಿಳಿದುಕೊಳ್ಳಲಿ, ಅವರ ಕಡೆಗೆ ಕೊಟ್ಟುಬಿಡಬೇಕು ಎಂದೇ ಕಡೆಗೆ ನಿರ್ಧಾರಕ್ಕೆ ಬಂದಿದ್ದೇನೆ. ಆದರೆ ಕೊಡುವ ಧೈರ್ಯ ಮಾತ್ರ ಆಗುವದೋ ಇಲ್ಲವೋ ನೋಡಬೇಕಾಗಿದೆ...."

ಓದಿ ಮುಗಿಸಿದಾಗ ಸುಮಿತ್ರಮ್ಮನ ಕಣ್ಣುಗಳಲ್ಲಿ ಹನಿಗಳು ಮಿನುಗುತ್ತಿದ್ದವು. ಅವು ದುಃಖಾಶ್ರುಗಳೋ ಆನಂದಾಶ್ರುಗಳೋ ಬಹುತರವಾಗಿ ಅವಳಿಗೂ ತಿಳಿದಿರಲಿಕ್ಕಿಲ್ಲ ಸುಮಿತ್ರಮ್ಮ ಅದೇ ಸ್ಥಿತಿಯಲ್ಲಿ ಹತ್ತು ಹನ್ನೆರಡು ನಿಮಿಷಗಳನ್ನು ಕಳೆದಿರಬಹುದು. ಅಷ್ಟರಲ್ಲಿ ಹೊರಗಿ

ಸಿಂದ ಯಾರೋ ಬಾಗಿಲು ತಟ್ಟುವ ಸಪ್ಪಳ. “ಈ ವೇಳೆಯಲ್ಲಿ ಆದಾರಿರಬಹುದು ?” ಎಂಬುದು ಅವಳಿಗೂ ಹೊಳೆಯಲಿಲ್ಲ. ಇನ್ನೊಮ್ಮೆ ಕಿವಿಗೊಟ್ಟು ಆಲಿಸಿದಳು.

“ಬಾಯಿಯವರೇ, ಬಾಯಿಯವರೇ,... ” ಪ್ಯೂನ ಗಣಪು ಕಿರುಚುತ್ತಿದ್ದ. ಸುಮಿತ್ರಮ್ಮನಿಗೆ ಧ್ವನಿಯು ಗೊತ್ತು ಸಿಕ್ಕಿತು. “ಬಂದೆ” ಎಂದು ಎದ್ದು ಹೋಗಿ ಬಾಗಿಲು ತೆರೆಯುತ್ತಲೇ “ಏಕೆ... ?” ಎಂದಳು.

“ಬೇಗ ಹೊರಡಿ ಬಾಯಿಯವರೇ” ಗಾಬರಿಯ ಧ್ವನಿ.

“ಯಾಕೆ ?”

“ಸೀರಿಯಸ್”

“ಯಾರಿಗೆ ?”

“ಮೂರ್ತಿರಾ....”

“ಆಂ !” ಸುಮಿತ್ರಮ್ಮನಿಗೆ ಆಕಾಶವೇ ಕಳಚಿಬಿದ್ದಂತಾಯಿತು ! ಬಾಯಿ ಮೂಕಾಯಿತು. ಅರೆ ನಿಮಿಷದ ನಂತರ ಕೇಳಿದಳು.

“ಏನಾಗಿದೆ ?”

“ನನಗೆ ತಿಳಿಯದು. ದೊಡ್ಡ ಸಾಹೇಬರು ತಮ್ಮನ್ನು ಕರೆದು ಬಾ ಎಂದರು. ಬಂದೆ. ಬೇಗ ನಡೆಯಿರಿ.”

“ನಡೆ” ಎಂದವಳೇ ಹಾಗೆಯೇ ಹೊರಟಳು ನರ್ಸು ಸುಮಿತ್ರಮ್ಮ.

೪

ಜೂನ ಹದಿನೈದು; ಮುಂಜಾನೆ ಒಂಭತ್ತು ಗಂಟೆಯ ಸಮಯ. ಸುಮಿತ್ರಮ್ಮ ಮೂರ್ತಿಯ ಬಳಿಯಲ್ಲಿಯ ಖುರ್ಚಿಯನ್ನು ಬಿಟ್ಟು ಕದಲಿರಲಿಲ್ಲ. ನಿದ್ರೆಯಿಲ್ಲದೆ ಶರೀರ ಸೋತು ಬೆಂಡಾಗಿದ್ದಿತು; ಹೃದಯ ಭಾರವಾಗಿತ್ತು; ಬುದ್ಧಿ ಮಂಕಾಗಿತ್ತು; ಕರುಳು ಕೊರೆಯುತ್ತಲಿತ್ತು !

ನಿನ್ನೆ ರಾತ್ರಿ ಮೂರು ಗಂಟೆಗೆ ಮೂರ್ಛೆಹೋದ ಮೂರ್ತಿ ಇನ್ನೂವರೆಗೂ ಒಂದು ಕ್ಷಣವಾದರೂ ಅಲುಗಾಡಿರಲಿಲ್ಲ. ಹತ್ತು ನಿಮಿಷಕ್ಕೊಮ್ಮೆ

ನಾಡಿ ನೋಡಿ ನೋಡಿ ದೇಹದಲ್ಲಿ ಜೀವವಿದೆ ಎಂದು ಸುಮಿತ್ರಮ್ಮ ಸಮಾಧಾನ ತಂದುಕೊಳ್ಳುತ್ತಿದ್ದಳು! ಇಂಥ ಕೇಸುಗಳನ್ನು ಅವಳು ತನ್ನ ಹತ್ತು ವರ್ಷದ ಈ ಕೆಲಸದ ಅವಧಿಯಲ್ಲಿ ಕಂಡು ಉಪಚರಿಸಿದುದು ಅನೇಕ ಸಾರಿ. ಆದರೆ ಮೂರ್ತಿಯು ಮತ್ತು ತನ್ನ ನಡುವಿನ ಸಂಬಂಧ ಕೇವಲ ರೋಗಿ-ದಾದಿಗಳ ಸಂಬಂಧವಾಗಿ ಉಳಿದಿದ್ದಿಲ್ಲ, ಎಂಬುದನ್ನು ಅವಳ ಮನವು ಅರಿತಿದ್ದಿತು. ಈ ವಿಚಾರ ಬರುತ್ತಲೇ ಅವಳ ಕಣ್ಣು ಗಳಲ್ಲಿ ನೀರು ತಾನೇ ತಾನಾಗಿ ಇಣಿಕಿಕ್ಕುತ್ತಿದ್ದುವು. ಗಣಪೂನ ಸಂಗಡ ತಾನು ಧಾವಿಸಿ ಬಂದಾಗ ಕಂಡ ದೃಶ್ಯ ಅವಳ ಚಿತ್ತಭಿತ್ತಿಯ ಮೇಲೆ ಅಚ್ಚಳಿಯದೆ ಮೂಡಿ ನಿಂತಿದ್ದಿತು.

ಮೂರ್ತಿಯ ಕೋಣೆಯಲ್ಲಿ ಇಬ್ಬರು ಮುವ್ವರು ನರ್ಸುಗಳು, ಡಾಕ್ಟರರು; ಸ್ವತಃ ಡಾಕ್ಟರ ಆರಾನಾರೇ ನಿಂತಿದ್ದರು! ಮೂರ್ತಿ ನಿಶ್ಚೇಷ್ಟಿತನಾಗಿ ಬಿದ್ದುಕೊಂಡಿದ್ದ. ಮೈಮೇಲಿನ ಅರಿವೆಗಳೆಲ್ಲ ರಕ್ತಮಯ ವಾಗಿದ್ದುವು. ಅಲ್ಲಿ ಎಲ್ಲರ ಮುಖಗಳೂ ಕಳೆಗುಂದಿದ್ದುವು. ಸುಮಿತ್ರಮ್ಮ ನಿಗೆ ಏನೂ ತೋಚದೆ ಹೋಯಿತು; ದುಃಖ ಉಕ್ಕಿ ಬಂತು. ಕಣ್ಣೀರ ಹನಿಗಳು, ದಾರವು ಹರಿದುಹೋದ ಮುತ್ತಿನ ಸರದಿಂದ ಕಳಚಿಬೀಳುವ ಮುತ್ತುಗಳಂತೆ ಕಣ್ಣುಗಳಿಂದ ಉದುರುತ್ತಿದ್ದುವು. ಅವಳ ಸಹೋದ್ಯೋ ಗಿನಿಯೊಬ್ಬಳು ಹೇಳಿದ್ದಳು, "ಇದೇ ಈಗ ಅವರಿಗೆ ಒಂದು ಟೆಲಿಗ್ರ್ಯಾಂ ಬಂತು. ಮೂರ್ತಿರಾಯರು ಇನ್ನೂ ನಿದ್ರೆಹೋಗಿರಲಿಲ್ಲ; ಓದಿದರು. ಒಮ್ಮೆಲೇ, "ಅಯ್ಯೋ........ಅಕ್ಕಾಽಽ." ಎಂದು ಕಿರುಚಿದರು. ನಿಂತಿದ್ದ ವರು ಜೋಲಿ ಹೋಗಿ ಹಾಗೇ ನೆಲಕ್ಕುರುಳಿದರು. ಹಾರ್ಟಿಗೆ ಪೆಟ್ಟು ತಗ ಲಿತು. ಸುಮಾರು ಒಂದು ಕಪ್ಪಿನಷ್ಟು, ರಕ್ತ ಕಾರಿ.

"ಆದರಲ್ಲೇನಿತ್ತು?" ಎಂದು ಅವಳನ್ನು ನಡುವೆಯೇ ತಡೆದು, ಅಲ್ಲಿಯೇ ಟೇಬಲ್ಲಿನ ಮೇಲೆ ಬಿದ್ದ ಟೆಲಿಗ್ರ್ಯಾಮನ್ನು ಸುಮಿತ್ರಮ್ಮ ಓದಿದಳು. "Your sister delivered she and child both expired.

—Deshpande"

ಸುಮಿತ್ರಮ್ಮನಿಗೆ ಎಲ್ಲವೂ ಅರ್ಥವಾಯಿತು. ಕೇವಲ ತನ್ನಕ್ಕನಿಗಾಗಿ ಜೀವಿಸಲಿಚ್ಛಿಸುತ್ತಿದ್ದ ಮೂರ್ತಿಗೆ ಇದಕ್ಕೂ ಹೆಚ್ಚಿನ ಹೊಡೆತ ಎಂಥದು ಬೇಕು ? ಸುಮಿತ್ರಮ್ಮನಿಗೆ ತಡೆಯಲಿಲ್ಲ. ಅಯ್ಯೋ ಎಂದು ಹಲುಬಿದ್ದಳು.

ಡಾ. ಅರಾನಾ ಹೇಳಿದ್ದರು, "ಗಾಬರಿಯಾಗುವ ಕಾರಣವೇನೂ ಇಲ್ಲ. Keep him warm. ತುಸು ಪ್ರಜ್ಞೆ ಬಂದರೆ ಸಾಕು. ಅಷ್ಟೇನೂ ಸೀರಿಯಸ್ ಇಲ್ಲ." ಎಂದು. ಗ್ಲುಕೋಜ ಮತ್ತು ಸಲಾಯಿನ ಚುಚ್ಚಿ ಆಗಿದ್ದಿತು. ಆಕ್ಸಿಜನ ಇನ್‌ಹಿಲೇಶನವೂ ಆಗಿತ್ತು. ಆದರೆ ಅವರಿಂದ ಏನೂ ಉಪಾಯವಾಗಿರಲಿಲ್ಲ.

ಮೂರ್ತಿ ಯಾವಾಗ ಕಣ್ಣು ತೆರೆಯುವನೋ ಎಂದು ಸುಮಿತ್ರಮ್ಮ ಎವೆಯಿಕ್ಕದೆ ನೋಡುತ್ತ ಕುಳಿತಿದ್ದಳು. ಆದರೆ ಅಂಥ ಯಾವ ಚಿನ್ಹವೂ ಕಾಣಲಿಲ್ಲ.

ಹತ್ತು ಗಂಟೆಗೆ ಮತ್ತೆ ಡಾ. ಅರಾನಾ ಬಂದರು. ಮೂರ್ತಿಯ ಹೃದಯ ಪರೀಕ್ಷೆಮಾಡಿ ನುಡಿದರು. "ಇದೊಂದು ಕೊನೆಯ ಉಪಾಯ ಇನ್ನೊಮ್ಮೆ ಡಿಜಿಟ್ಯಾಲಿನ ಇಂಜಕ್ಟ ಮಾಡಿ ನೋಡಬೇಕು" ಟೆಥಾಸ್ಕೋಪ ತೆಗೆದಿಡುತ್ತಿರುವಾಗ ಅವರ ಮುಖ ಗಂಟಿಕ್ಕಿದ್ದಿತು.

ತರುವಾಯ ನಾಲ್ಕೈದು ನಿಮಿಷಗಳಲ್ಲಿ ಅದೂ ಆಯಿತು. ಈ ಸಾರೆ ಚುಚ್ಚುವಿಕೆಯ ಉಪಯೋಗವಾಗಬಹುದೇನೋ ಎಂದು ಕಂಡು ಬಂದಿತು. ಇಲ್ಲಿಯ ವರೆಗೆ ಮೂರು ನಾಲ್ಕು ಸಾರೆ ಚುಚ್ಚಿದ್ದರೂ ಮೂರ್ತಿಗೆ ಅದರ ಅರಿವೇ ಇದ್ದಿರಲಿಲ್ಲ. ಆದರೆ ಈ ಸಾರೆ ಅದರಿಂದ ಅವನಿಗೆ ತುಸು ನೋವಾದಂತೆ ಕಂಡುಬಂದಿದ್ದಿತು. ಸುಮಿತ್ರಮ್ಮನಿಗೆ ಅಷ್ಟಕ್ಕೆ ಹಿಡಿಸಲಾರದಷ್ಟು ಹಿಗ್ಗು. "ಒಮ್ಮೆ ಪ್ರಜ್ಞೆ ಬಂದರೆ ಸಾಕು. ಮುಂದೆ ಬೇಕಾದ್ದು ಮಾಡೇನು" ಎಂದುಕೊಂಡಳು. ಡಾಕ್ಟರರ ಮೊಗವೂ ತುಸು ಗಂಟುಬಿಚ್ಚಿತು.

"ಇನ್ನೇನೂ ಹೆದರುವ ಕಾರಣವಿಲ್ಲ" ಎಂದು ಹೇಳಿ ಡಾ. ಅರಾನಾ ಹೊರಟು ಹೋದರು. ಸುಮಿತ್ರಮ್ಮ ಮೂರ್ತಿಯ ಪಕ್ಕದಲ್ಲಿಯೇ ಕುಳಿತು

ಕೊಂಡಿದ್ದಳು, " ಯಾವಾಗ ಮೂರ್ತಿ ಕಣ್ಣು ತೆರೆಯುವನೋ " ಎಂದು ನಿರೀಕ್ಷಿಸುತ್ತ.

ಸುಮಾರು ಹನ್ನೊಂದು ಹೊಡೆಯಲಿಕ್ಕೆ ಬಂದಿತ್ತು. ಮೂರ್ತಿ ತುಸು ಅಲುಗಾಡಿದ. ಎಚ್ಚರ ಬರುವಂತೆ ಕಂಡುಬಂದಿತು.

" ಮೂರ್ತಿರಾಯರೇ...." ಆಶಾದಾಯಕ ಮೃದು ಧ್ವನಿಯಿಂದ ಸುಮಿತ್ರಮ್ಮ ಕೂಗಿದಳು.

" ಹಾಂ ! " ಎಷ್ಟೋ ಆಯಾಸವಾದಂತಾಯಿತು ಮೂರ್ತಿಗೆ.

" ಈಗ ಹುಷಾರಾಗಿದೆಯೋ ? "

ಮೂರ್ತಿ ಮಾತನ್ನೇನೂ ಆಡಲಿಲ್ಲ. ಮೊಗವನ್ನು ಮಾತ್ರ ಹೊರಳಿಸಿದ. ಏನೋ ಕೆಟ್ಟ ಸಂಕಟವಾಗುತ್ತಿದ್ದಂತೆ ಮುಖವನ್ನು ಕಿವುಚಿದ್ದ. ಹಣೆಯ ಮೇಲೆ ಇಣಿಕಿಕ್ಕುತ್ತಿದ್ದ ಬೆವರ ಹನಿಗಳನ್ನು ಸುಮಿತ್ರಮ್ಮ ಮೆಲುವಾಗಿ ಒರೆಸಿದಳು.

" ಒಮ್ಮೆ ಮೂರ್ತಿಗೆ ಗುಣವಾದರೆ ಸಾಕು. ಅವನಕ್ಕನಂತೆಯೋ— ಅದೇಕೆ ಅವನಕ್ಕನಾಗಿಯೇ—ಅವನನ್ನು ನೋಡುವೆನು. ಕೂಸು ಇಷ್ಟು ದಿನ ಕಷ್ಟ ಸಹಿಸಿತು. ಇನ್ನು ಹಾಯಾಗಿರಲಿ. ಬಿ. ಎ. ಫಸ್ಟ್ ಕ್ಲಾಸು ಬರುವದಂತೂ ಖಂಡಿತ. ಮುಂದೆ ಎಮ್. ಎ. ಕ್ಕೂ ಹೋಗಲಿ. ನಾನೇ ಕಳಿಸುವೆನು. ಇನ್ನೇನೂ ಆತ ತ್ರಾಸು ತೆಗೆದುಕೊಳ್ಳುವದು ಬೇಡ....ನಿಜವಾಗಿಯೂ ನನಗೊಬ್ಬ ತಮ್ಮ ದೊರೆತ...." ಹುಚ್ಚು ಮನಸ್ಸು ಏನೇನೋ ಎಣಿಸುತ್ತಿತ್ತು. ನಿರ್ನಿಮೇಷಿತಳಾಗಿದ್ದ ಮೂರ್ತಿಯನ್ನು ನೋಡಿ—ನಿರಾಶೆಗೊಂಡ ಅವಳ ದೃಷ್ಟಿ ಸಹಜವಾಗಿ ಕಿಟಕಿಯಿಂದಾಚೆ ಚಲಿಸಿತು. ಬಿಸಿಲು ರಣರಣ ಹೊಡೆಯುವಂತಿತ್ತು. ಆಕಾಶದಲ್ಲಿ ಅಲ್ಲಲ್ಲಿ ಮೋಡಗಳು ಕಾಣುತ್ತಿದ್ದರೂ ಮಳೆಯ ಲಕ್ಷಣವೇನೂ ಇರಲಿಲ್ಲ. ಎದುರಿನ ಬಯಲಲ್ಲಿದ್ದ ಬೇವಿನ ಗಿಡದಲ್ಲಿ ಕಾಗೆಯೊಂದು ಕುಳಿತು ಒಂದೇ ಸವನೆ ಕಿರುಚುತ್ತಿತ್ತು !

ಮೂರ್ತಿ ಒಮ್ಮೆಲೇ ಕಣ್ಣು ತೆರೆದು ಸುತ್ತಲೂ ನೋಡಿದ. ಸುಮಿತ್ರಮ್ಮನ ಮೊಗದಲ್ಲಿ ಗೆಲುವು ಕಾಣಿಸಿಕೊಂಡಿತು. ಆದರೆ ಅದು ಬಹು

ಕಾಲ ನಿಲ್ಲಲಿಲ್ಲ. ಅವನಿಗೆ ಅದೇನೋ ವಿಪರೀತ ಸಂಕಟವಾಗುವಂತಿದ್ದಿತು ! ಮೂರ್ತಿ ಮತ್ತೆ ಕಣ್ಣು ಮುಚ್ಚಿದ.

“ ಇಗ ಹುಷಾರಾಗಿದೆಯೇ ? ”

ಮೂರ್ತಿ ಏನನ್ನೂ ಹೇಳಲಿಲ್ಲ. ಮುಂದೆರಡು ನಿಮಿಷಗಳಲ್ಲಿ ಅತ ಕೈ-ಕಾಲುಗಳನ್ನು ಎಳೆದುಕೊಳ್ಳತೊಡಗಿದ. ಅವನ ಶರೀರದಲ್ಲೆಲ್ಲ ಭಯಂಕರವಾದ ವೇದನೆಯಾಗುತ್ತಿದ್ದಿತು. ಒಮ್ಮೆಲೇ ಕೆಟ್ಟ ಧ್ವನಿಯಿಂದ “ ಅಃಃ ” ಎಂದು ಚೀರಿದ.

ಸುಮಿತ್ರಮ್ಮ ಬೆಚ್ಚಿಬಿದ್ದಳು ! ಅವಳ ಧೈರ್ಯವೆಲ್ಲವೂ ಉಡುಗಿ ಹೋಯಿತು. ಮೂರ್ತಿಯ ಎದೆ ಒತ್ತರದಿಂದ ಹಾರುತ್ತಲಿತ್ತು. ಶ್ವಾಸೋಚ್ಛ್ವಾಸ ತೀವ್ರತರವಾಗುತ್ತಲಿತ್ತು. ಅರ್ಧ ದೇಹ ಕತ್ತರಿಸಿ ಹೋದ ಹಾವಿನಂತೆ ಮೂರ್ತಿಯ ದೇಹ ಲಟಪಟ ಒದ್ದಾಡತೊಡಗಿತು. ಮೂರ್ತಿಯ ಆ ಕರುಣಾಜನಕ ಸ್ಥಿತಿಯನ್ನು ಸುಮಿತ್ರಮ್ಮನಿಂದ ನೋಡಲಾಗಲಿಲ್ಲ. ಕಣ್ಣುಗಳಿಂದ ನೀರು ತಾವೇತಾವಾಗಿ ಉದುರತೊಡಗಿದವು. ಹೃದಯದಲ್ಲಿ ಏನೋ ಒಂದು ಬಗೆಯ ಭಯಂಕರ ವೇದನೆಯಾಗತೊಡಗಿತು. ಏನು ಮಾಡಲಿಕ್ಕೂ ತಿಳಿಯಲಿಲ್ಲವಳಿಗೆ !

ಡಾ. ಅರಾಸಾರನ್ನು ಕರೆಕಳುಹಿದಳು. ಅವರು ಬಂದಾಗ ಸುಮಾರು ಹನ್ನೆರಡು ಹೊಡೆಯಲಿಕ್ಕೆ ಬಂದಿರಬಹುದು. ಮೂರ್ತಿಯು ಸಂಕಟ ಬಡುವುದನ್ನೂ, ಸುಮಿತ್ರಮ್ಮನ ಕರುಣಾಜನಕ ಸ್ಥಿತಿಯನ್ನೂ ನೋಡಿ ಅವರಿಗೂ ವೇದನೆಯಾಯಿತೆಂದು ಅವರ ಮುಖಭಾವ ಹೇಳುತ್ತಲಿತ್ತು. ಆದರೂ ಅವರು ಡಾಕ್ಟರರಲ್ಲವೇ ? ಮೂರ್ತಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರು. ಉಸಿರಾಡುವಿಕೆ ಇನ್ನೂ ಜೋರಾಗಿದ್ದಿತು. ಸುಮಿತ್ರಮ್ಮ ಕಲ್ಲಿನ ಪ್ರತಿಮೆಯಂತೆ ನಿಂತಿದ್ದಳು.

“ It is hoping against hope, ಸುಮಿತ್ರಮ್ಮಾ, ನನ್ನಿಂದ ಶಕ್ಯವಿದ್ದುದೆಲ್ಲವನ್ನೂ ಮಾಡಿದ್ದೇನೆ....” ಎನ್ನುತ್ತ ಹಣೆಯ ಮೇಲೆ ಕೈಯಾಡಿಸುತ್ತ ನಿಧಾನವಾಗಿ ಹೊರಟುಹೋದರು ಡಾಕ್ಟರರು.

ಸುಮಾರು ಐದು ನಿಮಿಷ ಕಳೆದಿರಬಹುದು. ಆಗಿನ ಸುಮಿತ್ರಮ್ಮನ ಮನಸ್ಥಿತಿಯನ್ನು ತಿಳಿಯುವದಸಾಧ್ಯವಾಗಿದ್ದಿತು.

ಮೂರ್ತಿ ಒಮ್ಮೆಲೇ ಕಣ್ಣು ತೆರೆದ. ತುಟಿಗಳು ಏನೋ ಹೇಳ ಬೇಕೆನ್ನುವಂತೆ ಅಲುಗಾಡಿದುವು. ಸುಮಿತ್ರಮ್ಮ ತನ್ನ ಮುಖವನ್ನು ಆತನ ಮುಖದ ತೀರ ಸಮೀಪಕ್ಕೆ ಒಯ್ದಳು. ಆತ ಅತಿ ಆಯಾಸ ದಿಂದ ' ಅ....ಕ್ಕಾss " ಎಂದಿಷ್ಟೇ ಉಸುರಿದ. ತೆರೆದ ಕಣ್ಣು ತೆರೆ ದಂತೆಯೇ ಇದ್ದುವು. ಮುಖ ಮಾತ್ರ ಹೊರಳಿತು ! ಸುಮಿತ್ರಮ್ಮನ ಎದೆ ಬಿರಿಯಿತು !!

" ಮೋರ್‍ಯಾsss " ಎಂದು ಕಿರುಚಿಕೊಂಡಳು !

ಆದರೆ ಅವಳ ಕೂಗು ಅವನಿಗೆ ಕೇಳಲಿಲ್ಲ ! ಮೂರ್ತಿ ನಿಜವಾ ಗಿಯೂ ಸಂಗಮರವರಿ ಕಲ್ಲಿನ ಮೂರ್ತಿಯಂತಾಗಲಿದ್ದ !

ಮಧ್ಯಾಹ್ನ ಎರಡು ಗಂಟೆಗೆ ಮೂರ್ತಿಯ ಗೆಳೆಯನಿಂದ ತಂತಿ ಯೊಂದು ಬಂದಿತು. " Congratulations You got first class. And first to the centre —Kulkarni. " .

ಅದನ್ನು ಓದಿದಾಗ ಡಾ. ಅರಾನಾ ಅವರಿಗೂ ತಡೆಯಲಾಗಲಿಲ್ಲ.

" What a pity, poor fellow ! ಇನ್ನೆರಡು ತಾಸಾದರೂ ಉಳಿಯಬೇಕಿತ್ತು " ಮಾತು ತಾನೇ ತಾನಾಗಿ ಉಸುರಿತು.

ಡಾಕ್ಟರರ ಕನ್ನಡಕ ಮಂಜುಗೂಡಿದ್ದಿತು ! ಕರವಸ್ತ್ರಕ್ಕಾಗಿ ಅವರ ಕರವು ಜೇಬಿನಲ್ಲಿಳಿಯಿತು !

# ವಯಸ್ಸೆಷ್ಟು ?

ಅಂದು ಅನಂತರಾಯರ ಮನೆಯಲ್ಲಿ ಸೊಗಸಿಗೆ ಕೊನೆಯೇ ಇಲ್ಲ ದಾಗಿದ್ದಿತು. ಎಲ್ಲರ ಮುಖಗಳೂ ಉಲ್ಲಸಿತವಾಗಿದ್ದುವು. ಆನಂದವೇ ಅವರ ಮನೆಯಲ್ಲಿ ನೆಲೆನಿಂತಿದ್ದಿತು ! ಇದಕ್ಕೆಲ್ಲ ಕಾರಣವೆಂದರೆ ಅವರ ಮಗಳು ಶಾರದೆಯನ್ನು 'ನೋಡಲಿಕ್ಕೆ' ಬರುವವರಿದ್ದರು. ತಮ್ಮ ಮಗ ಳನ್ನು ನೋಡಲಿಕ್ಕೆ ಬಂದರೆ ಇಷ್ಟೇಕೆ ಸಂತೋಷ ಎಂದು ಯಾರಿಗಾದರೂ ದಿಗಿಲು ಬಿದ್ದರೆ, ಅವರು ಸ್ವತಃ ಒಬ್ಬ ಹೆಣ್ಣುಮಗಳನ್ನು ಹೆತ್ತೇ ಅದನ್ನು ಪರಿಹರಿಸಿಕೊಳ್ಳಬೇಕು !

ಶಾರದೆಗೆ ಅದೇ ಇಪ್ಪತ್ತೆರಡು ನಡೆದಿದ್ದುವು. ರೂಪು ನಸುಗೆಂಪು. ಅಷ್ಟೊಂದು ಸುಂದರಿಯಾಗಿರಲಿಲ್ಲವಾದರೂ ಕುರೂಪಿ ಎಂದು ಹೇಳು ವಂತಿರಲಿಲ್ಲ. ಅನಂತರಾಯರು ಶಾರದೆಯ ಮದುವೆ ಮಾಡಿ ಈಗಾಗಲೇ ನಾಲ್ಕೈದು ವರ್ಷಗಳಾಗುತ್ತಿದ್ದುವು ಆದರೆ ಶಾರದೆಯೇ ಅದನ್ನು ತಡೆ ದಿದ್ದಳು. ಆದರೆ ಮದುವೆಯನ್ನು ಇನ್ನೂ ಎಷ್ಟು ದಿನ ಮುಂದೆ ಹಾಕಲು ಬಂದೀತು ?

ಸುಮಾರು ಐದು ಘಂಟೆಯ ಕಾಲಕ್ಕೆ ವರನ ತಂದೆಯಾದ ರಾಮ ರಾಯರು ತಮ್ಮ ಪರಿವಾರದೊಂದಿಗೆ—೨೪ ವರ್ಷದ ಅವರ ಮಗ ಶಾಮ ನೊಂದಿಗೆ ಸಹ—ಅನಂತರಾಯರ ಮನೆಗೆ ಬಂದರು. ಮನೆಯಲ್ಲಿಯ ಅಚ್ಚುಕಟ್ಟುತನವು ಅವರ ಮನವನ್ನು ಆಕರ್ಷಿಸಿದ್ದಿತು. ಅವರು, "ನಮ್ಮ ಶಾಮೂನ ದೈವ ದೊಡ್ಡದು ಇಂಥ ದೊಡ್ಡವರ ಮನೆ ಹೆಂಡತಿ ಸಿಗಬೇಕಾದರೆ...." ಎಂದು ಮನದಲ್ಲಿಯೇ ಅಂದುಕೊಂಡರು. ಅಷ್ಟೊಂದು ಶೃಂಗರಿಸಿದ್ದಳು ಶಾರದೆ. ಆ ಮಾತು ಈ ಮಾತುಗಳೊಂದಿಗೆ ಹುಡುಗೆ ಯನ್ನು ನೋಡುವದೂ ಆಯಿತು. ರಾಮರಾಯರು ಒಮ್ಮೆಲೇ ಕೇಳಿದರು.




" ಹುಡುಗೆಯ ವಯಸ್ಸೆಷ್ಟು ? "

ಅನಂತರಾಯರು ತಡವರಿಸುತ್ತ " ಹಂ ........ ........ ಈ ಚೈತ್ರಕ್ಕೇನೇ ಹದಿನೇಳು ತುಂಬಿದುವು."

" ಓಹೋ, ಹೀಗೇನು ? ನೋಡ್ರಿ ಅನಂತರಾಯರೇ, ನಾವು ಹುಡುಕುತ್ತಿರುವದು ಚಿಕ್ಕ ವಯಸ್ಸಿನ ಹುಡುಗೀನ್ನ. ಈಗಿನ ಹುಡುಗೇರೆಲ್ಲ ಇಪ್ಪತ್ತರ ವ್ಯಾಲೀ. ನಮ್ಮ ಶ್ಯಾಮುಗನ ಇನ್ನೂ ೨೩ ತುಂಬಿಲ್ಲ."

" ಸರಿ .... ಏನೂ ಅಡ್ಡಿಯಿಲ್ಲ."

" ಒಳ್ಳೇದು. ನಾವು ನಿಮಗೆ ಏನೆಂಬುದನ್ನು ಇನ್ನು ನಾಲ್ಕಾರು ದಿನಗಳಲ್ಲಿ ತಿಳಿಸುವೆವು."

" ಆಗಲಿ. ಆದಷ್ಟು ಬೇಗ ಶುಭವಾರ್ತೆಯನ್ನು ತಿಳಿಸಿರಿ. ಅಂದರಾತು."

ಚಹದ ' ಪ್ರೊಗ್ರ್ಯಾಮು ' ಮುಗಿದ ನಂತರ ಬಂದವರಿಗೆ ಅಪ್ಪಣೆಯಾಯಿತು.

*　　*　　*

ಶಾರದೆಗೆ ಕನಸಿನ ಮೇಲೆ ಬಲು ವಿಶ್ವಾಸ. ಅದರಂತೆ ಎಷ್ಟೋ ಸಾರೆ ಕನಸಿನಲ್ಲಿ ಕಂಡುದುದು ಅವಳಿಗೆ ಸತ್ಯವಾಗಿಯೂ ಪರಿಣಮಿಸಿತ್ತು ! ಅದಕ್ಕೆ ಕನಸಿನಮೇಲಿನ ಅವಳ ಭಕ್ತಿ-ವಿಶ್ವಾಸಗಳೇ ಕಾರಣವಾಗಿರಬಹುದೇನೋ. ಕೆಲಸಾರೆ ಅನಂತರಾಯರು, " ಹುಚ್ಚು ಹುಡುಗಿ " ಎಂದಂದು ನಸುನಕ್ಕದ್ದೂ ಉಂಟು. ಒಮ್ಮೆ ಅವಳಿಗೆ ತಾನು ಕ್ಲಾಸಿನಲ್ಲಿ ಮೊದಲನೆಯ ನಂಬರು ಬರುವಂತೆ ಕನಸು ಬಿದ್ದಿತ್ತು. ಆಗ ತಂದೆಯ ಸಂಗಡ ಪಣ ತೊಟ್ಟಿದ್ದಳು. ಶಾರದೆಯ ಸುದೈವ ! ಆ ವರುಷ ನಿಜವಾಗಿಯೂ ಅವಳು ಒಂದನೆಯ ನಂಬರು ಬರಬೇಕೇ ? ಹೀಗಾಗಿ ಅವಳ ಕನಸಿನ ಮೇಲಿನ ವಿಶ್ವಾಸ ಇನ್ನೂ ಬೆಳೆದಿದ್ದಿತು.

ಶಾರದೆಯನ್ನು ' ನೋಡಿ ' ಹೋದ ಮರುದಿನವೇ ಅವಳೊಂದು ಕನಸು ಕಂಡಳು. ಕನಸಿನಲ್ಲಿ ಒಬ್ಬ ದೇವತೆ ಬಂದು ಶಾರದೆಗೆ, "ಮಗು, ನಿನ್ನ

ದೈವ ತೆರೆಯುವುದು. ಈಗ ನೀನು ನಿನ್ನ ವಯಸ್ಸಿನಷ್ಟೇ ನಂಬರಿನ 'ಲಾಟ್ರಿ' ಟಿಕೆಟ್ಟು ಕೊಳ್ಳು. ನಿನಗೆ ಐದು ಸಾವಿರ ರೂಪಾಯಿ ದೊರೆಯುವುವು." ಎಂದು ಹೇಳಿದಂತೆ ಆಗಿತ್ತಂತೆ. ಮರುದಿನ ಅವಳಿಗೆ ಬಲು ಹಿಗ್ಗು. ತನ್ನ ಕನಸಿನಲ್ಲಿ ದೇವತೆಯೇ ಸ್ವತಃ ಬಂದು ಹೇಳಿದುದು ಎಂದಾದರೂ ಸುಳ್ಳಾದೀತೇ ? ತಂದೆಯನ್ನು ಒಪ್ಪಿಸಿ ಒಂದು ರೂಪಾಯಿ ದೊರಕಿಸಿಯೇ ಬಿಟ್ಟಳು.

ಕೂಡಲೇ ಶಾರದೆಯು ತನ್ನ ನೆರೆಮನೆಯ ಗೆಳತಿ ಸುಮತಿಯೊಂದಿಗೆ ಅಂಗಡಿಗೆ ಹೊರಟಳು. ದಾರಿಯುದ್ದಕ್ಕೂ ತನ್ನ ಕನಸುಗಳ ಅನುಭವವನ್ನೂ, ಮೊದಲ ದಿನವೇ ಬಿದ್ದ ಕನಸನ್ನೂ ಸವಿ ಸವಿಯಾಗಿ ಹೇಳುತ್ತ ನಡೆದಿದ್ದಳು.

ಅಂಗಡಿಗೆ ಹೋದ ನಂತರ ಅವಳು ತನ್ನ ಹಿಂದೆಯೇ ಬಂದ ರಾಮರಾಯರನ್ನು ಕಂಡು ಬೆಚ್ಚಿಬಿದ್ದಳು!

* * * * *

ಅಂದು, ಶಾರದೆ ಕೊಂಡ ಲಾಟ್ರಿ ಟಿಕೆಟ್ಟಿನ ಪರಿಣಾಮ ಪ್ರಸಿದ್ಧವಾಗುವ ದಿನ. ಅನಂತರಾಯರು ಯಾವುದೋ ಕೆಲಸಕ್ಕಾಗಿ ಪರವೂರಿಗೆ ಹೋಗಿದ್ದರು. ಅಲ್ಲಿಯೇ ಅವರಿಗೆ ಪರಿಣಾಮ ನೋಡಲು ದೊರೆತಿತು. ನಿಜವಾಗಿಯೂ ೨೨ ನೆಯ ನಂಬರಿಗೇ ಐದು ಸಾವಿರ ರೂಪಾಯಿಗಳು! ರಾಯರು ತಮ್ಮ ಕಣ್ಣುಗಳನ್ನು ನಂಬದೆ, ಇನ್ನೊಮ್ಮೆ ನೋಡಿದರು! ಅವರ ಆನಂದಾಶ್ಚರ್ಯಗಳಿಗೆ ಮೇರೆ ಉಳಿಯಲಿಲ್ಲ. "ಇನ್ನು ಶಾರದೆಯ ಮದುವೆ ಯಾಕೆ ತಡವಾಗುತ್ತದೆಯೋ ನೋಡುತ್ತೇನೆ." ತಮ್ಮಲ್ಲಿ ತಾವೇ ಅಂದುಕೊಂಡರು "ಈಗಿನ ಹುಡುಗೇರು ಇಪ್ಪತ್ತರ ಮ್ಯಾಲ! ಹೌದು. ೨೨ ವಯಸ್ಸು ಇಲ್ಲದಿದ್ದರೆ ೫ ಸಾವಿರ ಎಲ್ಲಿ ಸಿಗುತ್ತಿತ್ತು?" ರಾಯರು ಕೂಡಲೇ ಉಗಿಬಂಡೆಯ ನಿಲ್ದಾಣಕ್ಕೆ ಧಾವಿಸಿದರು. ಆದರೆ ಗಾಡಿ ಬಿಡಲು ಇನ್ನೂ ಎರಡು ತಾಸು ವೇಳೆ. ಸಂಪೂರ್ಣ ಒಂದು ನೂರಾ ಇಪ್ಪತ್ತು ನಿಮಿಷಗಳು! ಹೇಗೆ ಕಳೆಯಬೇಕು?

ರಾಯರಿಗೆ ಎರಡು ತಾಸುಗಳೆಂದರೆ ಎರಡು ಶತಮಾನಗಳಂತೆ ಕಂಡು ಬಂದಿತು!

ಅಂತೂ ಸರಿಯಾದ ವೇಳೆಗೆ ಗಾಡಿ ಬಿಟ್ಟಿತು. ರಾಯರ ಸುದೈವ ದಿಂದ ಗಾಡಿ "ಲೇಟು" ಆಗಿರಲಿಲ್ಲ! ಗಾಡಿಯ ವೇಗ ರಾಯರ ದೃಷ್ಟಿ ಯಲ್ಲಿ ತೀರ ಮಂದತಮವಾಗಿದ್ದಿತು. "ಏನಪ್ಪಾ ಈ ಗಾಡಿ. ಹೆಬ್ಬಾವಿ ನಂತೆ ಹೊರಟಿದೆಯಲ್ಲ!" ಎಂದು ಮನದಲ್ಲಿಯೇ ಮಿಡುಕಿದರು. ಗಾಡಿ ತನ್ನ ನಿತ್ಯದ ನಿಯಮಕ್ಕನುಗುಣವಾಗಿಯೇ ಓಡುತ್ತಿತ್ತು. ಅದಕ್ಕೆ ರಾಯ ರಂತೆ ಐದು ಸಾವಿರ ರೂಪಾಯಿ ದೊರೆತಿರಲಿಲ್ಲವಷ್ಟೇ!

ಊರು ಬಂದಿತು. ಗಾಡಿ ನಿಂತಿತು. ಅನಂತರಾಯರು ಬೇಗನೇ ಇಳಿದು ಸುತ್ತೆಲ್ಲ ನೋಡಿದರು. ತಮ್ಮವರು ಯಾರೂ ಕಾಣಲಿಲ್ಲ. "ಕಡೆಗೆ ಒಬ್ಬ ಟಾಂಗಾದವನಾದರೂ ಬೇಗನೇ ಬರಬಾರದೇ? ದೇವರು ಈ ಮಂಗಮಕ್ಕಳಿಗೆ ಅದೆಷ್ಟು ಸೊಕ್ಕು ಕೊಟ್ಟು, ಮರೆತಿದ್ದಾನಪ್ಪಾ!" ಎಂದುಕೊಂಡರು.

"ಟಾಂಗಾವಾಲಾ, ಟಾಂಗಾವಾಲಾಽ,.... ಏ ಟಾಂಗಾವಾಲಾಽ" ರಾಯರು ಕೂಗಿದರು.

"ಬಂದೆ ರಾಯರೇ."

"ಬೇಗ ಬಾ. ಹನುಮನ ಬೀದಿಗೆ."

"ಒಂದು ರೂಪಾಯಿ ........"

"ಎಲಾ ಇವನ! ರೂಪಾಯಿ ಎಂದಾದರೂ ಕಂಡಿದೀಯೋ ಇಲ್ಲೋ? ಲಗೂನೆ ಮುಟ್ಟಿಸು. ಎರಡು ರೂಪಾಯಿ ಕೊಡ್ತೇನೆ."

ಟಾಂಗಾದ ಗಾಲಿಗಳು ವೇಗವಾಗಿ ತಿರುಗುತ್ತಿದ್ದುವು. ರಾಯರ ತಲೆ ಯಲ್ಲಿ ವಿಚಾರತರಂಗಗಳೂ ಮೂಡಿ, ಅಳಿಸಿ ಮತ್ತೆ ಮೂಡಿ, ಮತ್ತೆ ಅಳಿಸಿ ಚಕ್ರಾಕಾರವಾಗಿ ಸುಳಿಯುತ್ತಿದ್ದುವು. ಅಷ್ಟರಲ್ಲಿ ಅದೆಷ್ಟೋ ಹಗ ಲುಗನಸುಗಳನ್ನು ಕಂಡಿದ್ದರು ರಾಯರು!

ರಾಯರ ಮನೆ ಬಂದಿತು. ಜೇಬಿನೊಳಗಿಂದ ಎರಡು ರೂಪಾಯಿಯ ಕೆಂಪು ನೋಟೊಂದನ್ನು ತೆಗೆದೊಗೆದು ರಾಯರು ಹಾಗೆಯೇ ಮನೆಯೊ ಳಕ್ಕೆ ಧುಮುಕಿದರು. ಪಡಸಾಲೆಯಲ್ಲಿ ಯಾರೂ ಇರಲಿಲ್ಲ.

" ಶಾರದಾ, ಶಾರದಾಽ ... ... ... ... ಏ, ಶಾರದಾ ಮನ್ಯಾಗ ಇಲ್ಲೇನಽ ? " ಎನ್ನುತ್ತ ಅಡಿಗೇ ಮನೆ ಕಡೆಗೆ ನಡೆದರು.

ತನ್ನ ಕೋಣೆಯೊಳಗಿಂದ ಶಾರದೆ " ಯಾಕೆ, ಏನಾಯಿತು ? ಯಾವಾಗ ಬಂದಿರಿ ? " ಎಂದು ರಾಯರ ಧ್ವನಿಗೆ ತಡಬಡಗೊಂಡು ಹೊರಬಂದಳು,

" ಮೊದಲು ದೇವರಿಗೆ ತುಪ್ಪದ ದೀಪ ಹಚ್ಚು " ರಾಯರಲ್ಲಿ ಭಕ್ತಿ ರಸ ತುಂಬಿ ಹರಿಯಿತು.

" ಯಾಕ ? "

" ಎಲಾ ಹುಚ್ಚಿ ! ನಿನಗೇನು ಹುಚ್ಚು-ಗಿಚ್ಚು ಹಿಡೀತೇನು ? "

" ಯಾರಿಗೆ .... ? " ... " ನನಗಂತೂ ಏನೂ ತಿಳಿಯಲೊಲ್ಲದು. "

" ನಿನ್ನ ಲಾಟ್ರಿ ಟಿಕೆಟ್ಟಿಗೆ ೫ ಸಾವಿರ ರೂಪಾಯಿ ದೊರೆತಿಲ್ಲವೇನು ? "

" ಇಲ್ಲ .... "

" ಹಾಂ, ಏನಂದಿ ? " ತುಸು ಗಾಬರಿಯಾದರು ರಾಯರು.

" ಇಲ್ಲಾಽ ಅಂದೆ, ಭಕ್ಷೀಸು ೨೨ ನೇ ನಂಬರಿಗೆ, ನನ್ನದು ೧೮ ನಂಬರು. "

" ಹಂ — ಇದೇನು ? "

" ಯಾಕೇನು, ನೀವೇ ಅಂದು ಹೇಳಲಿಲ್ಲೇನು ಆ ರಾಮರಾಯರಿಗೆ, ನನ್ನ ವಯಸ್ಸು ೧೮ ಎಂದು ? "

" ಆದರೆ ಅದು ಸುಳ್ಳು ! "

" ಹಾಗಾದರೆ ಇದು ಆ ಸುಳ್ಳಿಗೆ ಪ್ರಾಯಶ್ಚಿತ್ತ " ಎಂದು ಶಾರದೆ ತಾನು ೨೨ ನಂಬರಿನ ಟಿಕೆಟ್ಟನ್ನೇ ತರಬೇಕೆಂದು ಹೋಗುವಾಗ ರಾಮರಾಯರು ತನ್ನ ಹಿಂದಿನಿಂದ ಬರುತ್ತಿದ್ದರಾದ್ದರಿಂದ, ಅವರು ತನ್ನ ಮತ್ತು ಸುಮತಿಯ ನಡುವಿನ ಮಾತನ್ನು ಕೇಳಿರಬಹುದೆಂದು, ಅನಂತರಾಯರೇ

ಹೇಳಿದ ಸುಳ್ಳನ್ನು ಮುಚ್ಚುವದಕ್ಕಾಗಿ ೧೮ ನಂಬರಿನ ಟಿಕೆಟ್ಟನ್ನು ಕೊಂಡುದುದಾಗಿ ವಿವರಿಸಿದಳು.

ರಾಯರು “ ನನ್ನ ದೈವ! ನಾನೇಕೆ ಸುಳ್ಳು ಹೇಳಿದೆನೋ ? ೫ ಸಾವಿರ ಹೋದರೆ ಹೋಗಲಿ. ಈಗ ಟಾಂಗಾದವನಿಗೆ ಪುಕ್ಕಟೆಯಾಗಿ ೨ ರೂಪಾಯಿ ಕೊಟ್ಟೆನಲ್ಲ! ” ಎನ್ನುತ್ತ ವಿರಾಮಖುರ್ಚಿಯೊಂದರಲ್ಲಿ ನಿಧಾನವಾಗಿ ಒರಗಿದರು !

—X—

# ರಾಮೂನ ಬಿ. ಎ.

ರಾಮೂ ನಮ್ಮ ಸೋದರತ್ತೆಯ ಮಗ. ನನಗೂ ಅವನಿಗೂ ಚಿಕ್ಕಂದಿನಿಂದಲೂ ಬಲು ಗೆಳೆತನ. ಆತ ನನಗಿಂತ ಐದಾರು ವರುಷಕ್ಕೆ ಹಿರಿಯನಿದ್ದರೂ ನಮ್ಮಿಬ್ಬರಲ್ಲಿಯೂ ಪ್ರೀತಿ, ವಿಶ್ವಾಸ ಬೆಳೆದುಕೊಂಡು ಬಂದಿದ್ದವು. ನಾನು ಚಿಕ್ಕವನಿರುವಾಗ ಆತ ತಾನು ಓದಿದ ಇಂಗ್ಲೀಷು ಪುಸ್ತಕದೊಳಗಿನ ಸಣ್ಣ ಸಣ್ಣ ಕತೆಗಳನ್ನು ನನಗೆ ಹೇಳಿ ನಗಿಸಿ ತಾನೂ ನಗುತ್ತಲಿದ್ದ. ಆಗಿನಿಂದಲೂ ರಾಮೂ ಅಂದರೆ ನನಗೆ ಇಲ್ಲದ ಅಭಿಮಾನ, ಆದರ, ಪ್ರೀತಿ. ಆತ ಬಲು ಬುದ್ಧಿವಂತ, ಓದಿದವ ಎಂದು ಮೊದಲಿನಿಂದಲೂ ನಾನು ತಿಳಿದುಕೊಂಡಿದ್ದೆ.

ಮೊನ್ನೆ ಎಪ್ರಿಲ ತಿಂಗಳಲ್ಲಿ ಆತ ತನ್ನ ಬಿ. ಎ. ಪರೀಕ್ಷೆ ಮುಗಿಸಿ ನಮ್ಮ ಊರಿಗೆ ಅದೇ ಬಂದಿದ್ದ. ನಮ್ಮೆಲ್ಲರಿಗೂ ಬಲು ಆನಂದ, ಹೆಮ್ಮೆ. ನಮ್ಮ ತಾಯಿಯಂತೂ ಮಾತಿನ ಭರದಲ್ಲಿ ನನಗೆ “ ಮೋನಿ, ನೀನು ಹೆಣ್ಣು ಆಗಬಾರದಿತ್ತೇ? ಆಗಿದ್ದರೆ ಈಗ ರಾಮೂಗೆ ಕೊಟ್ಟು ಬಿಡುತ್ತಿದ್ದೆ.” ಎಂದಿದ್ದರು! ಆಗ ನನಗೆ ನಮ್ಮ ತಾಯಿಯ ಮೇಲೆ ಇಲ್ಲದ ಕೋಪ

ಬಂದರೂ, ಮರುಕ್ಷಣದಲ್ಲಿಯೇ ರಾಮೂ ನನ್ನ ಕಣ್ಣ ಮುಂದೆ ಬರಲು "ಅಹುದು ಹಾಗಾಗಿದ್ದರೂ ಒಳಿತೇ ಆಗುತ್ತಿತ್ತೊ ಏನೋ" ಎನ್ನಿಸಿತು.

ರಾಮೂ ನಮ್ಮೂರಿಗೆ ಬಂದು ಇನ್ನೂ ಪೂರ್ತಿಯಾಗಿ ಒಂದು ವಾರ ಕೂಡ ಕಳೆದಿರಲಿಲ್ಲ. ನಮ್ಮ ನೆರೆಯೂರ ನಾಡಗೌಡ ಶೇಷಗಿರಿರಾಯರು ನಮ್ಮ ಮನೆಗೆ ಬಂದರು. ಅವರು ನಮ್ಮ ಮನೆಗೆ ಆಗಾಗ ಬರುತ್ತಿರಲಿಲ್ಲವಾದರೂ ಸಹಜವಾಗಿ ಎಂದಾದರೂ ಬರುತ್ತಿದ್ದರು. ಅದರಂತೆಯೇ ಈ ಸಾರೆಯಾದರೂ ಬಂದಿರಬಹುದೆಂದು ತಿಳಿದುಕೊಂಡೆ. ಆಗಲೇ ಮಧ್ಯಾಹ್ನ ಐದು ಘಂಟೆಯ ಮೇಲಾಗಿ ಹೋಗಿತ್ತು. ನಾನೂ ರಾಮುವೂ ಕೂಡಿ ನಮ್ಮ ತೋಟಕ್ಕೆ ಹೋಗಿ ಹಾಯಾಗಿ ಸಂಜೆಯ ಕಾಲ ಕಳೆಯ ಬೇಕೆಂದು ಮಾಡಿಕೊಂಡಿದ್ದೆವು. ಅಂದು ಮನೆಯಲ್ಲಿ ಏನೋ ಹಬ್ಬವಿತ್ತು. ಊಟವೂ ಸಾಕಷ್ಟು ತಡವಾಗಿಯೇ ಆದ್ದರಿಂದ ಚಹದ ಹಾದೀ ನೋಡದೇ ನಾವು ಹೊರಗೆ ಹೊರಟೆವು. ಪಡಸಾಲೆಯಲ್ಲಿ ನಮ್ಮ ತಂದೆಯವರೂ ಶೇಷಗಿರಿರಾಯರೂ ಮಾತನಾಡುತ್ತ ಕುಳಿತಿದ್ದರು. ನಾವು ಹೊರಟುದು ದನ್ನು ಕಂಡು ನಮ್ಮ ತಂದೆಯವರು "ಏನಿರೋ, ಇಷ್ಟು ಬೇಗ ಎಲ್ಲಿ ಹೊರಟಿರಿ?" ಎಂದು, ನನಗೆ "ಒಳಗೆ ಚಹಾ ಮಾಡಲಿಕ್ಕೆ ಹೇಳು" ಎಂದರು. ನನಗೆ ಆ ಮಾತುಗಳು ಬೇಸರವನ್ನುಂಟು ಮಾಡಿದರೂ ಸುಮ್ಮನೆ ಮರುಮಾತನಾಡದೆ ಒಳಗೆ ನಡೆದೆ. ರಾಮುವನ್ನು ಅವರು ಅಲ್ಲಿಯೇ ಕೂಡ್ರಿಸಿಕೊಂಡಿದ್ದರು.

ನಾನು ಚಹ ತೆಗೆದುಕೊಂಡು ಹೊರಗೆ ಬಂದಾಗ ಅವರ ಮಾತು ಕತೆಗಳ ಮೇಲಿಂದ ರಾಯರು ಏಕೆ ಬಂದಿದ್ದರೆಂಬುದನ್ನು ತಿಳಿದುಕೊಂಡೆ. —ರಾಯರ ತಂಗಿಯ ಮಗಳೊಬ್ಬಳಿರುವಳು. ಅವಳನ್ನು ಅವರೇ ಜೋಕೆ ಮಾಡಿದ್ದರಂತೆ, ರಾಮುವಿಗೆ ಅವಳನ್ನು ಕೊಡಬೇಕೆಂದು ಪ್ರಸ್ತಾಪಕ್ಕೆ ಬಂದಿರುವರು—. ಚಹ ಕುಡಿದು ಹೊರಡುವ ಕಾಲಕ್ಕೆ ನಮ್ಮ ತಂದೆಯವರು, "ಹುಡುಗಿಯನ್ನು ಇಲ್ಲಿಯೇ ಕರೆದುಕೊಂಡು ಬಂದಿದ್ದರೆ ಒಳಿತಾಗುತ್ತಿತ್ತು." ಎಂದರು. ಅದಕ್ಕೆ ರಾಯರು "ಹಾಗೂ ಮಾಡಬಹುದಿತ್ತು. ಆದರೆ ಇಲ್ಲದ ತೊಂದರೆಯೇಕೆ? ನೀವೇ ಬಂದು ಬಿಟ್ಟರೆ ಆಗುತ್ತದಲ್ಲ." ಎಂದರು. ನಮ್ಮ ತಂದೆಯವರೂ ಅದಕ್ಕೆ "ಆಗಲಿ" ಎಂದು ಬಿಟ್ಟರು.

" ಇಲ್ಲದ ತೊಂದರೆ ಎಂತಹದು ? " ಎನ್ನುವದೇ ನನಗೆ ತಿಳಿಯದೆ ಹೋಯಿತು. ಕೊನೆಗೆ ತಿರುಗಾಡಲಿಕ್ಕೆ ಹೋದಾಗ ನಾನು ರಾಮುವನ್ನು ಕೇಳಿಯೇ ಬಿಟ್ಟೆ. ಆತ, " ಹಾಗಲ್ಲ, ನಿನಗೆ ಇಷ್ಟೂ ತಿಳಿಯಬಾರದೆ ? ಆದಕ್ಕೇ ನಾನೆನ್ನುವದು ನಿನಗೆ ಬುದ್ಧಿ ಕಡಿಮೆ ಎಂದು. ಅಲ್ಲವೋ ಸಿರಿವಂತರ ತೊಂದರೆಗೇನು ಕಡಿಮೆ ? ಆದಕ್ಕಾಗಿ ಅಲ್ಲಿಯೇ ಬರಹೇಳಿದರು. ಅಲ್ಲದೆ ತಮ್ಮ ಹೊಸ ' ಕಾರು ' ಕಳಿಸುವರಂತೆ" ಎಂದ. ನಾನೂ ಹೆಚ್ಚು ಮಾತನಾಡಲಿಲ್ಲ. ಮತ್ತೆ ತಾನೇ ಹೇಳಿದ "ವರದಕ್ಷಿಣೆಯ ವಿಷಯ ಏನೂ ಕೊರತೆಯಾಗದೆಂದು ಅವರು ಹೇಳಿರುವರು. ಬೇಕಾದರೆ ಮುಂದೆ ಕಲಿಯಲಿಕ್ಕೆ ಅನುಕೂಲ ಮಾಡಿ ಕೊಡುವುದಾಗಿಯೂ ಒಂದು ಮಾತು ಆಡಿದರು. ನಿಜವಾಗಿ ನೋಡಿದರೆ ನನಗೆ ಈಗ ಮದುವೆಯ ಮನಸ್ಸಿರಲಿಲ್ಲ. ಆದರೂ ನೋಡಿ ಬರಲಿಕ್ಕೇನು ? ಎಂದು ಹೂಂ ಅಂದೆ. ಇಷ್ಟೆ " ಎಂದ. ನನಗೂ ಅವನ ಮಾತು ಸರಿಯೆನಿಸಿತು. ತಿರುಗಾಡಿ ನಾವು ಮನೆಗೆ ಬಂದಾಗ ರಾತ್ರಿ ಎಂಟೂವರೆಯಾಗಿ ಹೋಗಿತ್ತು.

ಸುಂದರ ಹಳ್ಳಿ ನಮ್ಮೂರಿನಿಂದ ನಾಲ್ಕು ಮೈಲಿಗಿಂತ ಹೆಚ್ಚು ದೂರವಿಲ್ಲ. ಅದರಲ್ಲಿಯೂ ಶೇಷಗಿರಿರಾಯರ ಹೊಸ ಕಾರಿನಲ್ಲಿ ಕುಳಿತು ಹೋದ ನಮಗೆ ಏನೂ ತೊಂದರೆಯೆನಿಸಲಿಲ್ಲ. ಕಾರು ರಾಯರ ಮನೆಯ ಮುಂದೆ ನಿಲ್ಲುವದೇ ತಡ, ಅವರು ಒಳ್ಳೇ ಅಟ್ಟಹಾಸದಿಂದ ನಮ್ಮನ್ನು ಬರಮಾಡಿಕೊಂಡರು. ರಾಮು ಮತ್ತು ನಾನು ಎಲ್ಲರಿಗಿಂತಲೂ ಹಿಂದೆಯೇ ಇದ್ದೆವು. ರಾಯರು ನಮ್ಮನ್ನು ನೇರವಾಗಿ ಅಟ್ಟದ ಮೇಲೆ ಕರೆದುಕೊಂಡು ಹೋದರು. ಅದೊಂದು ದೊಡ್ಡ ಪ್ರಶಸ್ಥ ಹಾಲು. ಬೆಳಕು ಎಲ್ಲ ಕಡೆಯಿಂದಲೂ ಧುಮುಕುತ್ತಿತ್ತು. ಗಾಳಿ ತೊಂದರೆಯಾಗದಂತೆ ಮಂದವಾಗಿ ಸುಳಿಯುತ್ತಿತ್ತು. ಪರ್ಶಿಯಾದ ದೊಡ್ಡದಾದ ಒಂದು ಸುಂದರ ರತ್ನಗಂಬಳಿಯು ನೆಲವನ್ನು ಅಲಂಕರಿಸಿತ್ತು. ಎಲ್ಲಿ ನೋಡಿದರೂ ಸ್ವಚ್ಛತೆಯೇ ಮಂದಹಾಸ ಬೀರುತ್ತಿತ್ತು. ಹಾಲಿನ ನಟ್ಟ ನಡುವೆ ಒಂದು ವಿಶಾಲವಾದ ದುಂಡು ಮೇಜು ಶೋಭಿಸುತ್ತಿತ್ತು. ಅದರ ಸುತ್ತಲೂ ಹತ್ತೆಂಟು ಸುಖಾಸನಗಳು ನೆಲೆಗೊಂಡಿದ್ದುವು. ಮೇಜಿನ ಮೇಲೆ ನಕ್ಷೆ ತೆಗೆದ ಬಿಳ್ಳಗಿನ,

ತೆಳ್ಳಗಿನ ಅರಿವೆಯೊಂದನ್ನು ಹೊದಿಸಿದ್ದರು. ನಡುವೆ ಕಾಜಿನ ಪಾತ್ರೆಯೊಂದರಲ್ಲಿ ಅದೇ ಆಗ ಗಿಡದಿಂದ ತೆಗೆದ ಸುಂದರ ಬಣ್ಣ ಬಣ್ಣದ ಹೂಗೊಂಚಲು ತಲೆದೂಗುತ್ತಿತ್ತು. ಇದೆಲ್ಲವನ್ನೂ ನೋಡಿ ನನಗೆ 'ನಾನೇ ರಾಮುವಾಗಬಾರದಾಗಿತ್ತೇ...........?' ಎನ್ನಿಸದಿರಲಿಲ್ಲ! ಸಹಜದಾಗಿ ನನ್ನ ದೃಷ್ಟಿ ರಾಮುವಿನ ಕಡೆಗೆ ಹೋದಾಗ ಆತನ ಮದಸ್ಮಿತವು ಎದುರುಗೊಂಡಿತು!

ಆಸನವೊಂದರಲ್ಲಿ ನವಯುವತಿಯೋರ್ವಳು ಕುಳಿತಿದ್ದಳು. ಅವಳ ಮುಖಭಾವ, ಉಡುಗೆ ತೊಡಿಗೆಗಳನ್ನು ನೋಡಿ ಇವಳೇ ರಾಯರ ತಂಗಿಯ ಮಗಳಿರಬಹುದೆಂದು ತಿಳಿದುಕೊಂಡೆ. ನಾವು ಹಾಲನ್ನು ಪ್ರವೇಶಿಸುತ್ತಲೇ ಅವಳು ಎದ್ದು ನಮ್ಮನ್ನು ಸ್ವಾಗತಿಸಬಯಸಿದಳು. ಆದರೆ ಶೇಷಗಿರಿರಾಯರೇ "ಇರಲಿ, ಕೂತುಕೊಳ್ಳಮ್ಮಾ, ಅವರೇನು ಅಪರಿಚಿತರೇ?" ಎಂದರು. ಅವಳೂ ಅಷ್ಟಕ್ಕೇ ಸುಮ್ಮನಾದಳು. ನಾವು ನಮಗೆ ತಕ್ಕ ಆಸನಗಳ ಮೇಲೆ ಕುಳಿತೆವು. ರಾಮೂ ನನ್ನ ಹತ್ತಿರವೇ ಇದ್ದ. ಹರಟೆಗೆ ಮೊದಲಾಗಿ ಏಕೋ ಬೇಗನೇ ಮುಗಿಯಿತು. ರಾಯರು ನಮ್ಮ ತಂದೆಯವರಿಗೆ, "ಸುಮ್ಮನೇ ತಡವೇಕೆ? ಕನ್ಯಾ ಪರೀಕ್ಷೆಯಾಗಲಿ. ರಾಮರಾಯರೇ, ನೀವೂ ಏನಾದರೂ ಕೇಳುವದಿದ್ದರೆ ಕೇಳಿರಿ" ಎಂದರು. ನಾನು ರಾಮುವಿನ ಕಡೆಗೆ ನೋಡಿದಾಗ ಆತನೂ ನನ್ನ ಕಡೆಗೇ ನೋಡುತ್ತಲಿದ್ದ. ನಾನು ಇನ್ನಿಷ್ಟು ಕುತೂಹಲದಿಂದ ನಿರೀಕ್ಷಿಸತೊಡಗಿದೆ.

"ನಿನ್ನ ಹೆಸರೇನವಾ ತಂಗಿ?"

"ವಿಮಲಾ"

"ಎಷ್ಟು ಮಂದಿ ಅಣ್ಣ ತಮ್ಮಂದಿರು?"

"ಒಬ್ಬ ತಮ್ಮನಿದ್ದಾನೆ"

"ಓದು-ಬರೆಹ ಬರುವದೇನು?"

"ಮನೆಯಲ್ಲಿಯೇ ಸ್ವಲ್ಪ ಕಲಿತಿದ್ದೇನೆ."

ಓದಿಸಿಯೇ ಬಿಡಬೇಕೆಂದು ನನಗನಿಸಿತು. ಅಷ್ಟರಲ್ಲಿ ಶೇಷಗಿರಿರಾಯರು 'ಬೇಕಾದರೆ ಓದಿಸಿರಿ' ಎಂದರು. ನಮ್ಮ ತಂದೆಯವರು "ಒಂದು

ಪುಸ್ತಕ ತೆಗೆದುಕೊಂಡು ಬರುವಿಯಾ ? ” ಎಂದರು. ಆದರೆ ರಾಯರೇ ಅಷ್ಟರಲ್ಲಿ ಧಾವಿಸಿ ಒಂದು ಪುಸ್ತಕ ತಂದುಬಿಟ್ಟಿದ್ದರು ! ಪುಸ್ತಕವಾಚನವೂ ಆಯಿತು. ಅಷ್ಟೇನು ತಪ್ಪು ತಡೆಗಳಾಗಲಿಲ್ಲ. ಅಲ್ಲಿಯೇ ಇದ್ದ ಪುರೋಹಿತ ರಂಗಾಚಾರು “ ಏನೂ ಅಡ್ಡಿಯಿಲ್ಲ. ಇದಕ್ಕೂ ಹೆಚ್ಚಿಗೆ ತೆಗೆದುಕೊಂಡೇನು ಮಾಡುವದು; ಹೆಂಗಸರನ್ನು ಕಚೇರಿಗೆ ಕಳಿಸುವದಿದೆಯೇನು ? ” ಎಂದು ತಮ್ಮ ಅಭಿಪ್ರಾಯವನ್ನು ಅವಶ್ಯಕತೆಯಿಲ್ಲದಿದ್ದರೂ ಹೇಳಿದರು.

“ ಇನ್ನೇನಾದರೂ ಕೇಳುವದಿದ್ದರೆ ಆಗಲಿ ” ರಾಯರು ಸ್ವಾಭಾವಿಕ ವಾಗಿ ಅಂದರು. ಅದಕ್ಕೆ ಮತ್ತೆ ರಂಗಾಚಾರು, “ ಇನ್ನೇನು ಕೇಳುವದು ಅದರ ? ಓದಲಿಕ್ಕೆ ಬರ್ತದ, ಬರೀಲಿಕ್ಕೆ ಬರ್ತದ, ಹುಡುಗಿ ನೋಡಿದರೆ ‘ ಗೌರಿ ’ ಆಗ್ಯಾಳ. ಮುಗದಹೋತು. ‘ ಶುಭಸ್ಯ-ಶೀಘ್ರಮ್ ’ ಯಾಕರಿ ?” ಎಂದು ರಾಮುವಿನ ಕಡೆಗೆ ನೋಡಿದರು. ರಾಮು ಮೌನವಾಗಿಯೇ ಇದ್ದ. ‘ ಮೌನಂ ಅರ್ಧ ಸಮ್ಮತಿ ಲಕ್ಷಣಂ ’ ಎಂದು ತಿಳಿದರೋ ಏನೋ ರಾಯರು.

ಅಷ್ಟರಲ್ಲಿ ಕೆಳಗೆ ಕಪ್ಪು-ಬಸಿಗಳ ಸದ್ದಾಯಿತು. ರಾಯರ ಮನೆಯ ಚಹ ಉಪ್ಪಿಟ್ಟು ತೆಗೆದುಕೊಂಡೇ ನಾವು ಹೊರಟೆವು.

ಮನೆಗೆ ಬಂದ ಮೇಲೆ ನಮ್ಮ ತಂದೆಯವರು, ‘ಏನು ವಿಚಾರ? ’ ಎಂದು ರಾಮುವನ್ನು ಕೇಳಿದರು. ಅದಕ್ಕೆ ಆತ “ ಉಳಿದುದೇನೂ ಅಡ್ಡಿಯಿಲ್ಲ. ಆದರೆ ಅವರು ವರದಕ್ಷಿಣೆಯ ಮಾತೇ ಎತ್ತಲಿಲ್ಲವಲ್ಲ ? ” ಎಂದ. ಅದಕ್ಕೆ ನಮ್ಮ ತಂದೆಯವರು, “ ಈಗಿನ ಜನರು ನೀವು ಹೀಗೆಯೆ ಶುದ್ಧ ಮಂಕರು. ಆ ವರದಕ್ಷಿಣೆ ತಲೆಗೆ ಬೆಂಕಿ ಇಡು ! ಅಲ್ಲವೋ ಅವಳು ಎದ್ದು ಹೋಗಿ ಪುಸ್ತಕ ತರಲಿಲ್ಲವಲ್ಲ, ಯಾಕೆ ವಿಚಾರ ಮಾಡಿದೆಯೇನು ? ” ಎಂದರು.

ರಾಮು ಬೆಪ್ಪಾದ ! ನನಗೂ ಆಶ್ಚರ್ಯವೆನಿಸಿತು. ಅಲ್ಲಿಯೇ ಇದ್ದ ರಂಗಾಚಾರು ‘ ಹೊರಗೆ ಯಾರು ಬಂದರೋ ? ’ ಎಂದು ನೋಡುವ ನೆವ ಮಾಡಿ ಕಾಲ್ತೆಗೆದರು ! ಆಗ ರಾಮು ನನಗೆ ಬುದ್ಧಿ ಕಡಿಮೆ ಎನ್ನುತ್ತಿದ್ದ,

ಆದರೆ ಈಗ ? ಎನ್ನಿಸಿತು. ರಾಮೂನ ಬಿ. ಎ. ಹಾಳಾಗಲಿ ! ಆ ಹುಡುಗಿ ಹೆಳವಿ ಎಂಬುದನ್ನು ಸಹ ತಿಳಿಯದೆ ಹೋಗಬೇಕೆಂದರೇನು ?

ಎಲ್ಲ ಬಿ. ಎ. ಗಳೂ ಹೀಗೇ ಏನೋ ಎನ್ನಿಸಿತು. ಆದರೆ ಹಾಗೇನೂ ಇರಲಿಕ್ಕಿಲ್ಲವೆಂದುಕೊಂಡೆ—ಯಾಕಂದರೆ ನಾನೂ ಬಿ. ಎ. ಆಗಬೇಕು ಎಂದು ಎಣಿಸಿದ್ದೆ — ಇಷ್ಟೂ ಕೂಡ ವ್ಯವಹಾರಜ್ಞಾನವಿಲ್ಲದ ರಾಮು ಆ ಸಾರೆ ಬಿ. ಎ. ಪರೀಕ್ಷೆ ಪಾಸಾಗಲಾರನೆಂದೇ ಅನ್ನಿಸಿತ್ತು.

ಆದರೆ ನನ್ನ ಆಶ್ಚರ್ಯಕ್ಕೆ ಕಳಸವಿಟ್ಟಂತೆ, ಪರಿಣಾಮ ಪತ್ರಿಕೆಯಲ್ಲಿ ನೋಡಿದಾಗ ರಾಮೂನ ಹೆಸರು ಮೊದಲನೆಯ ವರ್ಗದಲ್ಲಿ ಕಾಣಿಸಿಕೊಳ್ಳುತ್ತಿತ್ತು. !

# ತ್ಯಾಗ

ಅಂದು ವನಿತಾವಿದ್ಯಾಮಂದಿರದ ಹದಿನೈದನೆಯ ಹುಟ್ಟು ಹಬ್ಬ. ಶಾಲೆಯ ಪ್ರತಿ ಭಾಗವೂ ಅಲಂಕರಿಸಲ್ಪಟ್ಟಿದೆ; ಶೋಭಿಸುತ್ತಿದೆ; ಪ್ರೇಕ್ಷಕರ ಕಣ್ಣಿಗೆ ಹಬ್ಬದೂಟ ಉಣ್ಣಿಸುತ್ತಿದೆ. ತಳಿರು-ಗುಡಿ-ತೋರಣಗಳಿಗಂತೂ ಕೊರತೆಯೇ ಇರಲಿಲ್ಲ. ಅಲ್ಲಿ ಓಡಾಡುವ ಪ್ರತಿಯೊಬ್ಬರಲ್ಲಿಯೂ ಒಂದು ಬಗೆಯ ಅವಸರ-ಗಡಿಬಿಡಿ ಎದ್ದು ಕಾಣುತ್ತಿದೆ. ಮಂದಿರವನ್ನು ಶೃಂಗರಿಸುವ ಕಾರ್ಯವು ಆ ಶಾಲೆಯ ವಿದ್ಯಾರ್ಥಿನಿಯರಿಂದಲೇ ಆಗಿದ್ದಿತು. ಇಷ್ಟೆಲ್ಲವನ್ನು ಮಾಡಿದ್ದರೂ ಒಬ್ಬರ ಮೊಗದ ಮೇಲೆ ಕೂಡ ಬೇಸರದ ಅಂಶ ಕಂಡು ಬರುತ್ತಿರಲಿಲ್ಲ. ಶಾಲೆಗೆ ಸಂಬಂಧಿಸಿದ ಪ್ರತಿಯೊಂದು ವ್ಯಕ್ತಿಯಲ್ಲಿಯೂ ಒಂದು ಬಗೆಯ ಉತ್ಸಾಹ, ಆನಂದಗಳೇ ಒಡೆದು ಕಾಣುತ್ತಲಿವೆ.

ಶಾಲೆಯ ಮಧ್ಯದಲ್ಲಿದ್ದ ವಿಶಾಲವಾದ ಹಾಲಿನಲ್ಲಿ ಎಲ್ಲ ವಿದ್ಯಾರ್ಥಿನಿಯರೂ ಪ್ರೇಕ್ಷಕರೂ ನೆರೆದಿದ್ದರು. ಅಂದಿನ ಸಭೆಗೆ ಊರಿನ ಅನೇಕ ಗಣ್ಯ

ವ್ಯಕ್ತಿಗಳೂ ಆಗಮಿಸಿದ್ದರು. ಶಾಲೆಯ ಮುಖ್ಯಾಧ್ಯಾಪಕಿಯರಾದ ಶ್ರೀಮತಿ ಲಲಿತಮ್ಮನವರೇ ಅಂದಿನ ಸಭೆಗೆ ಅಧ್ಯಕ್ಷೆಯರಾಗಿದ್ದರು. ಸಭೆಯಲ್ಲಿ ಶಾಲೆಯ ಮಕ್ಕಳ ಕಾವ್ಯಗಾಯನ ಮತ್ತು ಕೆಲವು ಅಧ್ಯಾಪಕಿಯರ ಭಾಷಣಗಳಾದ ಮೇಲೆ, ಲಲಿತಮ್ಮನವರು ಮಾತನಾಡಲಿದ್ದರು. ಅಧ್ಯಾಪಕಿಯರಲ್ಲೊಬ್ಬರಾದ ಶ್ರೀಮತಿ ಸಾವಿತ್ರಮ್ಮನವರು ಮಾತನಾಡುತ್ತ, " .................... ನಮ್ಮ ಶಾಲೆಯನ್ನು ಪ್ರಾರಂಭ ಮಾಡಿದ ಮತ್ತು ಇಲ್ಲಿಯ ವರೆಗೆ ಅದನ್ನು ಉತ್ತಮ ರೀತಿಯಿಂದ ನಡಯಿಸಿಕೊಂಡು ಬಂದ ಭಾಗ್ಯ ಮತ್ತು ಹಿರಿಮೆ ನಮ್ಮ ಲಲಿತಮ್ಮನರಿಗೇ ಸಲ್ಲುವದು. ಅವರು ' ಶಾಲೆಯೇ ತಮ್ಮ ಮನೆ, ಮನೆಯೇ ಶಾಲೆ ' ಎಂದು ತಿಳಿದುಕೊಂಡು ದುಡಿದಿದ್ದಾರೆಂಬುದು ಪ್ರತಿಯೊಬ್ಬರಿಗೂ ತಿಳಿದ ವಿಷಯವೇ. ಅವರ ಹೃದಯದಲ್ಲಿ ವಿದ್ಯೆಗೆ ಮತ್ತು ವಿದ್ಯಾಪ್ರೇಮಿಗಳಿಗೆ ಒಂದು ಮಹತ್ತ್ವದ ಸ್ಥಾನವುಂಟೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಶಾಲೆಯ ಉನ್ನತಿಗಾಗಿ ಅವರು ಸಹಿಸಿದ ತೊಂದರೆಗಳಿಗೆ ಮಿತಿಯಿಲ್ಲ. ಅದರಂತೆ ಇನ್ನು ಮುಂದೆಯಾದರೂ ನಮ್ಮ ಶಾಲೆಯ ಏಳ್ಗೆಗಾಗಿ ಹೆಣಗುವರು, ಮತ್ತು ಅದನ್ನು ಒಂದು ಅತ್ಯುತ್ತಮ ಆದರ್ಶ ಶಾಲೆಯನ್ನಾಗಿ ಮಾಡುವರೆಂಬುದರಲ್ಲಿ ನನ್ನ ಸಂಪೂರ್ಣ ನಂಬಿಗೆಯಿದೆ. .... ...." ಎಂದು ಮುಂತಾಗಿ ಲಲಿತಮ್ಮನವರ ಗುಣಗಾನವನ್ನು ಮಾಡಿದ್ದರು. ಅವರ ಪ್ರತಿಮಾತಿಗೂ ಸಭಾಗೃಹವು ಕೈಚಪ್ಪಾಳೆಯ ಸಪ್ಪಳದಿಂದ ತುಂಬಿ ಹೋಗುತ್ತಲಿದ್ದಿತು.

ತರುವಾಯ ಶ್ರೀಮತಿ ಲಲಿತಮ್ಮನವರು ಮಾತನಾಡಲೆಂದು ಎದ್ದರು. ಸಭೆಯಲ್ಲಿ ಎಲ್ಲರ ಕಿವಿಗಳೂ ಕರತಾಡನದಿಂದ ಗಡಚಿಕ್ಕಿ ಹೋದುವು. ' ಶಾಂತರಾಗಿರಿ ' ಎಂಬ ಅವರ ಸಂಜ್ಞೆಯ ತರುವಾಯವೇ ಗೃಹದಲ್ಲಿ ಸಂಪೂರ್ಣ ಶಾಂತತೆ ಆವರಿಸಿತು. ಅವರ ಸರಳ-ಸ್ವಾಭಾವಿಕ ಮಧುರ ಮಂದಸ್ಮಿತವು ಸಭಿಕರನ್ನು ಮಾರುಗೊಂಡಿದ್ದಿತು. ಅವರು ತಮ್ಮ ಮಧುರವಾದ ವಾಣಿಯಿಂದ ಮಾತನಾಡಲಾರಂಭಿಸಿದಾಗ ಸಭಿಕರಿಗೆ ನವಿರುಗಳೆದ್ದಿರಲಿಕ್ಕೆ ಸಾಕು. ಅವರ ಶಬ್ದಗಳಲ್ಲಿ ಅಷ್ಟೊಂದು ಅಸಾಧಾರಣ ಶಕ್ತಿಯಿದ್ದಿತು. ಅವರು, " ಸಭಿಕರೇ, ನಮ್ಮ ಶಾಲೆಯ ಹದಿನೈದನೆಯ ಹುಟ್ಟುಹಬ್ಬವನ್ನು

ಈಡೇರಿಸಲಿಕ್ಕೆ ಈಗ ನನಗಾಗುತ್ತಿರುವ ಆನಂದದ ಸವಿ ನನಗೇ ಗೊತ್ತು. ಅದನ್ನು ಬಾಯಿಮಾತಿನಿಂದ ಹೇಳಲು ಸಾಧ್ಯವಿಲ್ಲ. ಶ್ರೀಮತಿ ಸಾವಿತ್ರಮ್ಮ ನವರು ನನಗೆ ಸಲ್ಲದ ಹಿರಿಮೆಯನ್ನು ಕೊಡಲು ಯತ್ನಿಸಿದರು. ಅದು ಅವರ ಸಭ್ಯತೆ ಮಾತ್ರ, ಇರಲಿ. ನಮ್ಮ ಶಾಲೆ ಈಗಿದ್ದ ಸ್ಥಿತಿಗೆ ಬರಬೇಕಾದರೆ ಬಂದ ಎಡರು-ತೊಡರುಗಳದೆಷ್ಟೋ, ಆದರೆ ಅಷ್ಟೆಲ್ಲವನ್ನೂ ದಾಟಿ ಈ ಸ್ಥಿತಿಯಲ್ಲಿ ನಿಂತಿರುವುದನ್ನು ನೆನೆದರೆ ನನಗೆ ಅತ್ಯಾನಂದವಾಗುತ್ತಿದೆ. ಈ ಆನಂದಕ್ಕೆ ಊರ ಅದೆಷ್ಟೋ ಮಹನೀಯರೂ ಕಾರಣರೆಂದು ನಾನಿಲ್ಲಿ ಹೇಳದಿರಲಾರೆ. ........." ಸುಮಾರು ೧೫-೨೦ ನಿಮಿಷ ಶಾಲೆಯ ಇತಿಹಾಸವನ್ನು ಸಂಕ್ಷಿಪ್ತವಾಗಿ ವಿವರಿಸಿದರು.

ತರುವಾಯ ವಿದ್ಯಾರ್ಥಿನಿಯರ ಕಡೆಗೆ ಹೊರಳಿ, "ನನ್ನ ಮುದ್ದು ತಂಗಿಯರೇ, ನಾನೀಗ ವಿಶೇಷವಾದುದೇನನ್ನೂ ಹೇಳದೆ, ನಿಮ್ಮ ಭಾವೀ ಜೀವನದಲ್ಲಿ ನಿಮ್ಮ ಅನುಭವಕ್ಕೆ ಬರಬಹುದಾದ ಎಡರು-ತೊಡರುಗಳ ಬಗ್ಗೆ ಮತ್ತು ಅವನ್ನು ಹೇಗೆ ಎದುರಿಸಲು ನಾವು ಪ್ರಯತ್ನಿಸಬೇಕೆಂಬುದನ್ನು ಕುರಿತು ಒಂದೆರಡು ಮಾತುಗಳಲ್ಲಿ ಹೇಳಬಯಸುವೆನು."

"ಸ್ತ್ರೀಯು ಪುರುಷನಿಗೆ ಒಂದು ಬಿಡಿಸಲಾರದ ಸಮಸ್ಯೆಯಾಗಿದ್ದಾಳೆ. ಸಮಾಜದಲ್ಲಿ ಸ್ತ್ರೀಗೆ ಇರುವ ಸ್ಥಾನ-ಮಾನಗಳೇನು, ಅವಳ ಸ್ವಾತಂತ್ರ್ಯದ ಮಿತಿ ಎಲ್ಲಿಯ ವರೆಗೆ, ಅಥವಾ ಅವಳು 'ಸ್ವಾತಂತ್ರ್ಯ' ಶಬ್ದವನ್ನೇ ಮರೆಯಬೇಕೋ? ಅವಳು ಯಾವಾಗಲೂ 'ಹಂಗಿನರಮನೆ' ಯಲ್ಲಿಯೇ ಬೆಳೆದು ಅಲ್ಲಿಯೇ ಅಳಿಯಬೇಕೇ? ಅವಳಿಗೂ ಆಶೆ-ಆತುರತೆಗಳು ಇರುವುದಿಲ್ಲವೇ? ಎಂಬಿವುಗಳನ್ನು ಇಂದು ಸಮಾಜವು ವಿಚಾರಿಸಬೇಕಾಗಿದೆ..... ......." ಮಾತುಗಳು ಅಳ್ಳು ಹುರಿದಂತೆ ಬರುತ್ತಲಿದ್ದವು.

"ಆದರಲ್ಲಿಯೂ ಸ್ತ್ರೀಯ ಜೀವನದಲ್ಲಿ ಮದುವೆಯು ಒಂದು ಅತಿ ಮಹತ್ತ್ವದ ಸಮಸ್ಯೆಯಾಗಿದೆ. ಮದುವೆಯೆಂದರೇನು? ತಾಯಿ-ತಂದೆಗಳ ಮನಸ್ಸಿಗೆ ಬಂದ ಯಾರೋ ಒಬ್ಬರನ್ನು ಹಿಡಿದು ತಂದು ಮಗಳ ಕೊರಳಿಗೆ ಕಟ್ಟಿದರೆ, ಅಥವಾ ಅವಳ ಮನದ ವಿರುದ್ಧ ಒಬ್ಬನೊಂದಿಗೆ ನಾಲ್ಕು ಅಕ್ಕಿ

ಕಾಳಗಳನ್ನು ಒಗೆದು, ನೆರೆದ ಜನರು ತಮ್ಮ ಮನಕ್ಕೆ ಬಂದಂತೆ ನಕ್ಕು ನಲಿದು ತಿಂದು-ತೇಗಿ ಹೊರಟು ಹೋದರೆ ಅದು ಮದುವೆಯೇ ? ಮದುವೆ ಯಾರಿಗಾಗಿ, ಮಾಡುವವರಿಗಾಗಿಯೋ ಇಲ್ಲವೆ ಮಾಡಿಕೊಳ್ಳುವವರಿಗಾಗಿಯೋ ? ಎರಡೂ ಜೀವಿಗಳ ಮನಗಳು ಒಂದಗೂಡಬೇಡವೇ ? ಮದುವೆಯಾಗಬೇಕಾದರೆ ಮಗಳ ಅಥವಾ ಮಗನ ಮನವನ್ನು ತಿಳಿಯಬೇಡವೇ ? ......" ಅವರ ವಾಣಿಯಲ್ಲಿ ಒಂದು ಕಠೋರತೆಯಿದ್ದಿತು, ಆದರೂ ಅದಕ್ಕೆ ಸತ್ಯದ ಹಿನ್ನೆಲೆಯಿಲ್ಲದಿರಲಿಲ್ಲ. ಸಭಿಕರೆಲ್ಲರೂ ಅವರ ಮಾತುಗಳನ್ನು ಕೇಳುತ್ತ ಚಿತ್ರದಲ್ಲಿಯ ಬೊಂಬೆಗಳಂತೆ ಕುಳಿತಿದ್ದರು. ಸುಮಾರು ಅರ್ಧ ತಾಸು ಈ ವಿಷಯವಾಗಿ ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯಗಳನ್ನು ಬೈಲಿಗೆಳೆದರು.

ಅವರು ಇನ್ನೂ ಹೇಳುತ್ತ, "ಅವಳಿಗೂ ಅಂತಃಕರಣವಿಲ್ಲವೇ ? ತನ್ನ ಜೀವನದ ಸಂಗಾತಿಯನ್ನು ಒಪ್ಪುವಷ್ಟು ಸ್ವಾತಂತ್ರ್ಯ ಬೇಡವೇ ? ತಾನು ಮನದಲ್ಲಿ ವರಿಸಿದವನನ್ನು ಅವಳು ತನ್ನ ಕಲ್ಪನಾ ಸಾಮ್ರಾಜ್ಯದಲ್ಲಿಯೇ ಮರೆಯಬೇಕೇ ? ಅವಳ ಆಯ್ಕೆ ಒಂದು ವೇಳೆ ತಪ್ಪಲೂಬಹುದು. ಹಾಗಿದ್ದರೆ ತಂದೆತಾಯಿಗಳು ಅದಕ್ಕೆ ಅವಶ್ಯವಾಗಿ ಅಡ್ಡಿಮಾಡಲಿ; ಮಾಡಲೇಬೇಕು. ಆದರೆ ಎಲ್ಲ ರೀತಿಯಿಂದಲೂ ಯೋಗ್ಯನಾದವನೊಂದಿಗೆ, ಕೇವಲ ತಂದೆಯ ಮನಸ್ಸಿನ ಒಪ್ಪಿಗೆಯಿಲ್ಲದ ಮೂಲಕ ಮದುವೆಯಾಗದಿರಬೇಕೆಂದರೇನು ? ಎರಡು ಹೃದಯಗಳು ಒಂದುಗೂಡುವದು ಬಲು ಕಠಿಣ. ಒಮ್ಮೆ ಅವು ಬಂದಾದುವೆಂದರೆ ಅವುಗಳನ್ನು ವಿಂಗಡಿಸುವುದು ಇನ್ನೂ ಕಠಿಣ; ಅಥವಾ ಅಶಕ್ಯವೆಂದೇ ಹೇಳಬೇಕು. ಮುಂದೆ ಅವರು ತಮ್ಮ ಜೀವನವನ್ನೇ ಹಾಳುಮಾಡಿಕೊಳ್ಳಬೇಕೇ ? ಇದನ್ನು ತಂದೆ-ತಾಯಿಗಳೆಂದು ಕರೆಯಿಸಿಕೊಳ್ಳುವವರು ಯೋಚಿಸಬೇಡವೇ ?........ ಎಷ್ಟು ಸುಮಂಗಲೆಯರು ತಮ್ಮ ಜೀವನವನ್ನು ಹಾಳು ಮಾಡಿಕೊಂಡಿರುವರಲ್ಲ ! ಈ ಸಮಾಜ ಅದೆಷ್ಟು ಜನರನ್ನು ಬಲಿ ತೆಗೆದುಕೊಂಡಿದೆ....!"

ಎರಡು ಕ್ಷಣ ಅವರ ಮುಖದಿಂದ ಮಾತೇ ಹೊರಡಲಿಲ್ಲ. ಒಮ್ಮೆಲೇ "ಹಾಯ್.......ಹೋದ......" ಎಂದು ಏನನ್ನೋ ಮಾತನಾಡುತ್ತಿ

ರುವಾಗಲೇ ಅವರ ಕಣ್ಣಿಗೆ ಕತ್ತಲೆ ಬಂದಂತಾಗಿ, ಇನ್ನೊಂದು ಕ್ಷಣದಲ್ಲಿ ನೆಲಕ್ಕುರುಳುತ್ತಿದ್ದರು. ಆದರೆ ಅಲ್ಲಿಯೇ ಇದ್ದ ಸಾವಿತ್ರಮ್ಮನವರೇ ಸಾವರಿಸಿಕೊಂಡರು !

ಸಭೆಯಲ್ಲಿ ಕೋಲಾಹಲವೇ ಎದ್ದಂತಾಯಿತು. ಎಲ್ಲರೂ 'ಹೀಗೇಕಾಯಿತು' ಎಂದೆನ್ನುವವರೇ. ಎಲ್ಲರ ಮುಖಗಳೂ ದುಗುಡದಿಂದ ಆವರಿಸಲ್ಪಟ್ಟಿದವು. ಅವರಿಗೆ ಆಶಾಭಂಗವಾದಂತಾಯಿತು. ಲಲಿತಮ್ಮನವರ ಈ ಸ್ಥಿತಿಯನ್ನು ಕಂಡು ಅನೇಕ ಕಣ್ಣುಗಳು ತೇವವಾದವು ! ಕೊನೆಗೆ ಯಾರೋ ಒಬ್ಬರು ಬಂದು, "ಲಲಿತಮ್ಮನವರ ಮೈಯಲ್ಲಿ ಸ್ವಾಸ್ಥ್ಯವಿಲ್ಲ. ಅವರನ್ನು ಬೇರೆ ಕಡೆಗೆ ಸಾಗಿಸಲಾಗಿದೆ. ಇಂದಿನ ಸಭೆಯು ಈ ರೀತಿ ದುಃಖಾಂತವಾಗುವದೆಂದು ಯಾರೂ ಎಣಿಸಿರಲಿಲ್ಲ. ಉಪಾಯವಿಲ್ಲ. ದಯಮಾಡಿ ಎಲ್ಲರೂ ಶಾಂತರೀತಿಯಿಂದ ಹೋಗಬೇಕು" ಎಂದು ಹೇಳಿದರು. ಸಭಿಕರಲ್ಲಿ ಅನೇಕರು 'ಗುಜು-ಗುಜು' ಮಾತನಾಡುತ್ತ, ತಮತಮಗೆ ಸರಿಕಂಡ ಊಹೆಗಳನ್ನು ಮಾಡುತ್ತ ಹೊರಟು ಹೋದರು.

* * * * *

ವನಿತಾವಿದ್ಯಾಮಂದಿರವು, ಆರಂಭವಾದಂದಿನಿಂದ ಅಂಥ ದುಃಖದ ಪ್ರಸಂಗವನ್ನು ಅದೇ ಮೊದಲು ಎದುರುಗೊಂಡಿದ್ದಿತು. ಇಂದು ಆ ಮಾತಿಗೆ ಹದಿನೈದು ದಿನಗಳಾಗಿದ್ದುವು. ಲಲಿತಮ್ಮನವರ ಮೈಯಲ್ಲಿ ಅತಿ ತೀಕ್ಷ್ಣವಾದ ಜ್ವರ ಬಂದು, ಅವರು ಬಹಳೇ ಬಡವಾಗಿದ್ದರು. ಔಷಧ ನಡೆದೇ ಇದ್ದಿತು. ಆದರೇನು....? ಯಾರ ಸಂಗಡವೂ ಅವರು ವಿಶೇಷ ಮಾತನ್ನೇ ಆಡಿರಲಿಲ್ಲ. ಅವರನ್ನು ಹೀಗೇಕಾಯಿತೆಂದು ಕುರಿತು ಮಾತನಾಡುವ ಧೈರ್ಯವು ಅದಾರಿಗೂ ಆಗಿರಲಿಲ್ಲ ! ಅವರ 'ಜೀವದ'ಗೆಳತಿ ಸಾವಿತ್ರಮ್ಮನವರ ಮುಂದೆ ಅವರು ಏನನ್ನೂ ಬಚ್ಚಿಡುತ್ತಿರಲಿಲ್ಲವಾದರೂ, ಅಂದು ಹಾಗೇಕಾಯಿತೆಂಬುದನ್ನು ಮಾತ್ರ ಅವರ ಮುಂದೆ ಕೂಡ ಹೇಳಿರಲಿಲ್ಲ. ಅದಕ್ಕೆ ಏನಾದರೂ ಮಾರ್ಮಿಕವಾದ ಕಾರಣವಿರಲೇಬೇಕೆಂದು ಸಾವಿತ್ರಮ್ಮನವರೂ ಅರಿತಿದ್ದರು. ಆದರೂ, ಆ ವಿಷಯ ಲಲಿತಮ್ಮನವರಲ್ಲಿ ಪ್ರಸ್ತಾಪಿಸಿದರೆ ಮತ್ತೆ ಅವರಿಗೆ ಅದರಿಂದ ಹೆಚ್ಚು ಕೆಡಕೆನಿಸಬಹುದೆಂದು ಯೋಚಿಸಿ ಸುಮ್ಮನಾಗಿದ್ದರು. ಆದರೆ ಈಗ ಮಾತ್ರ ಅವರಿಂದ ತಡೆಯಲಾಗ

ಲಿಲ್ಲ. ಲಲಿತಮ್ಮನವರು ಹಾಸುಗೆಯಲ್ಲಿ ಬಿದ್ದುಕೊಂಡು ಕೊರಗುತ್ತಿರುವು ದನ್ನು ಕಣ್ಣಾರೆ ನೋಡಿ, ಆ ಕೊರಗಿನ ಕಾರಣವನ್ನು ಅರಿಯದೆ ಇರು ವುದು ಸಾವಿತ್ರಮ್ಮನವರಿಂದ ಅಸಾಧ್ಯವಾಯಿತು.

ಮುಂಜಾನೆ ಸುಮಾರು ಎಂಟು ಗಂಟೆಯ ಸಮಯ. ಲಲಿತಮ್ಮನ ವರು ಆಗಲೇ ಎದ್ದು ಕಾಫಿ ಕುಡಿದು ದಿಂಬಿಗೊರಗಿ ಶೂನ್ಯಮನಸ್ಕರಾಗಿ ಕುಳಿ ತಿದ್ದರು. ಬಳಿಯಲ್ಲಿಯೇ ಸಾವಿತ್ರಮ್ಮನವರೂ ಕುಳಿತಿದ್ದರು. ಆದರೂ ಯಾರ ಮುಖದಿಂದಲೂ ಒಂದು ಮಾತು ಕೂಡ ಹೊರಬಂದಿರಲಿಲ್ಲ. ಅವರಿಬ್ಬರೂ ಕೂಡಿದಾಗ ಹೀಗೆ ಮೌನದಿಂದ ವೇಳೆ ಕಳೆದ ಪ್ರಸಂಗಗಳು ತೀರ ಕಡಮೆ !

ಕೋಣೆಯಲ್ಲಿ ಪಸರಿಸಿದ ಶಾಂತತೆಗೆ ಭಂಗ ತರುವಂತೆ ಸಾವಿತ್ರ ಮ್ಮನವರು, "ಲಲಿತಮ್ಮನವರೇ,......." ಎಂದರು. ಅವರಿಬ್ಬರಲ್ಲಿಯೂ ಸಖ್ಯ ಬೆಳೆದು ಸುಮಾರು ಹನ್ನೆರಡು ಹದಿಮೂರು ವರ್ಷಗಳಾಗಿದ್ದರೂ ಅವ ರಿಬ್ಬರೂ ಇನ್ನೂ ಬಹುವಚನದಲ್ಲಿಯೇ ಮಾತನಾಡುತ್ತಿದ್ದರು.

ಸಾವಿತ್ರಮ್ಮನವರ ಕರೆಗೆ ಉತ್ತರವಾಗಿ ಲಲಿತಮ್ಮನವರು ತಮ್ಮ ದೃಷ್ಟಿಯನ್ನು ಅವರೆಡೆಗೆ ಹೊರಳಿಸಿದರೇ ವಿನಃ ಏನೆಂದೂ ಮಾತನಾಡಲಿಲ್ಲ.

"ಲಲಿತಮ್ಮನವರೇ ಕ್ಷಮಿಸಿರಿ. ನಾನು ತಮಗೊಂದು ಮಾತು ಕೇಳಬೇಕೆಂದಿರುವನು ......... ಇನ್ನು ನನ್ನಿಂದ ಸುಮ್ಮನಿರಲಾಗದು." ಅವರ ಮಾತಿನಲ್ಲಿ ಒಂದು ಬಗೆಯ ದೈನ್ಯವು ಒಡೆದು ಕಾಣುತ್ತಿದ್ದಿತಾದರೂ, ಅದರಲ್ಲಿ ಸಂಪೂರ್ಣ ಸ್ಥೈರ್ಯವಿದ್ದಿತು.

"ಸಾವಿತ್ರಮ್ಮನವರೇ, ನಾನು ನಿಮ್ಮಮುಂದೆ ಏನಾದರೂ ಮುಚ್ಚಿ ಟ್ಟಿರುವೆನೇ ! ಅದಕ್ಕೆ ಇಷ್ಟು ಸಂಕೋಚವೇಕೆ ? " ಅವರ ಪ್ರಶ್ನೆಯಲ್ಲಿಯೇ ಉತ್ತರವು ಅಡಕವಾಗಿದ್ದಿತಾದರೂ, ಅವರ ನಾಲಿಗೆಯು ತುಸು ಹಿಂಜರಿ ಯುತ್ತಿದ್ದಿತು.

"ಬಚ್ಚಿಟ್ಟಿಲ್ಲ. ಆದರೆ....... "

"ಆದರೆ ಏನು ? "

"ನನಗೆ ನೀವು ವಾಚಾಳಿ ಎಂದರೂ ಅಡ್ಡಿಯಿಲ್ಲ. ಸ್ಪಷ್ಟವಾಗಿ ಹೇಳು ತ್ತೇನೆ. ನೀವು ಏನನ್ನೋ ಬಚ್ಚಿಡುತ್ತಿರುವಿರಿ. ನಿಮ್ಮ ಕೊರಗನ್ನು ಪ್ರತ್ಯಕ್ಷ ಕಂಡು, ಅದರ ಕಾರಣವನ್ನು ಕೂಡ ಅರಿಯದೆ ಇರುವುದು ಇನ್ನು ನನ್ನಿಂದ

ಆಗದು. ನಾನೊಂದು ಮಾತು ಕೇಳುತ್ತೇನೆ. ಅದಕ್ಕೆ ನೀವು ಉತ್ತರ ಹೇಳ ಬೇಕು. ........ ಮೊನ್ನೆ ಹಾಗೇಕಾಯಿತು ? ಅದಕ್ಕೇನಾದರೂ ಸೂಕ್ಷ್ಮ ವಾದ ಕಾರಣವಿರಲೇಬೇಕೆಂದು ನನ್ನ ಭಾವನೆ. ”

ಸಾವಿತ್ರಮ್ಮನವರಿಂದ ಈ ಪ್ರಶ್ನೆ ಬರಬಹುದೆಂದು ಲಲಿತಮ್ಮನವರು ಮೊದಲೇ ತಿಳಿದಿದ್ದರು. ಆದರೂ ಅದನ್ನೇ ಅವರ ಮುಖದಿಂದ ಶಬ್ದರೂಪ ವಾಗಿ ಕೇಳುವುದು ಅವರಿಂದಾಗಲಿಲ್ಲ. ಏನೋ ದುಃಖವು ತುಂಬಿ ಬಂದಿತು. ಕೊರಳ ಸೆರೆ ಹಿಗ್ಗಿದುವು. ಮುಖದಿಂದ ಮಾತುಗಳೇ ಬರಲಿಲ್ಲ. ಕಣ್ಣಿನಲ್ಲಿ ನೀರು ಕಾಣಿಸಿಕೊಂಡುವು. ಒಮ್ಮೆಲೇ ಸಾವಿತ್ರಮ್ಮನವರನ್ನು ಅಪ್ಪಿಕೊಂಡು ಗಟ್ಟಿಯಾಗಿ ಅಳತೊಡಗಿದರು. ಸಾವಿತ್ರಮ್ಮನವರಿಗ ಏನೂ ತೋಚಲಿಲ್ಲ. ಅವರೂ ಅದೇ ಸ್ಥಿತಿಯ ಮೊದಲ ಮೆಟ್ಟಲಲ್ಲಿದ್ದರು ! ತಾನು ಹಾಗೆ ಕೇಳ ಬಾರದಾಗಿತ್ತೇನೋ ಎಂದೆನಿಸಿತೊಮ್ಮೆ. ಆದರೇನು, ಮಾತು ಮಿಂಚಿ ಹೋಗಿತ್ತು.

ಮೂಕದುಃಖ ಸುಮಾರು ಹದಿನೈದು ನಿಮಿಷ ಆವರಿಸಿದ್ದಿತು !

ಕೊನೆಗೆ ಸಾವಿತ್ರಮ್ಮನವರು, “ ಕ್ಷಮಿಸಿರಿ. ನಾನು ಹಾಗೆ ಕೇಳಬಾ ರದಿತ್ತು. ನಾನು ದುಡುಕಿದೆ...... ದುಃಖವನ್ನು ಪರರ ಮುಂದೆ ಹೇಳಿದರೆ ಅದರ ಆವೇಗವು ಕಡಿಮೆಯಾಗುವುದೆಂದು ಕೇಳಿದ್ದೆ, ಅದುಕಾರಣವೇ ತಮ್ಮನ್ನು ಕೇಳುವ ಸಾಹಸ ಮಾಡಿದೆ. ” ಎನ್ನುವಾಗ ಅವರ ಮೊಗದಲ್ಲಿ ಸಂಪೂರ್ಣ ತಪ್ಪಿತಸ್ಥನ ಕಳೆ ನಾಟ್ಯವಾಡುತ್ತಿತ್ತು.

“ ಇಲ್ಲ ಅಕ್ಕಾ, ನಿನ್ನ ಮುಂದೆ ಹೇಳದೆ ಇನ್ನಾರ ಮುಂದೆ ಹೇಳಲಿ ? ನಾನೇ ಹೇಳಬೇಕೆಂದಿದ್ದೆ. ಆದರೆ ನೀನೇ ಕೇಳಿದೆ. ” ಅವರ ಕಣ್ಣಿನಿಂದಿ ಳಿದು ಕೆನ್ನೆಯ ಕೆಳಭಾಗದಲ್ಲಿ ಕಾಣುತ್ತಿದ್ದ ಕಣ್ಣೀರಿನ ಹನಿಮುತ್ತೊಂದು ಕೆಳಗೆ ಕಳಚಿ ಬೀಳಲಿತ್ತು. ಈಗ ಸಾವಿತ್ರಮ್ಮನವರಲ್ಲಿ ನಿಜವಾದ ಭಗಿನೀ ಭಾವ ಹೊರಹೊಮ್ಮಿತು. ಅವರ ಕರುಳನ್ನು ಕಿವಿಚಿದಂತಾಯಿತು.

“ ಲಲಿತಮ್ಮಾ ನನಗಾದರೂ ಯಾರಿದ್ದಾರೆ ಈ ಜಗತ್ತಿನಲ್ಲಿ ? ನೀನೇ ನನ್ನ ಕಳೆದ ಜನ್ಮದ ಭಗಿನಿಯೆಂದು ತಿಳಿದಿರುವೆನು. ” ಅವರ ಕೈ ಅವರಿಗೆ ತಿಳಿಯದೆ ಸೀರೆಯ ಸೆರಗಿನಿಂದ ಲಲಿತಮ್ಮನ ಕಣ್ಣೀರನ್ನು ಒರೆಯಿಸುತ್ತಿತ್ತು.

ಕೆಲ ನಿಮಿಷಗಳ ತರುವಾಯ ಲಲಿತಮ್ಮನವರು "ಅಕ್ಕಾ, ನಿನ್ನ ದಲಿತ ಸಹೋದರಿಯ ದುಃಖಮಯ ಕತೆಯನ್ನು ಕೇಳಬೇಕೆಂಬಾಸೆ ಅಷ್ಟೊಂದಿದ್ದರೆ ಕೇಳು." ಎಂದು ಹೇಳಲನುವಾದರು. ಸಾವಿತ್ರಮ್ಮನವರ ಉತ್ಸುಕತೆ ಹೆಚ್ಚಿತು.

"ನಮ್ಮ ತಂದೆ ದೊಡ್ಡ ಜಮೀನುದಾರರು, ಪ್ರತಿಷ್ಠಿತರು, ವೈದಿಕ ಧರ್ಮದ ಹದಿನೆಂಟಾಣೆ ಅನುಯಾಯಿಗಳು, ನಾನು ನನ್ನ ತಾಯ ಹಾಲು ಕುಡಿಯಲಿಲ್ಲವಾದರೂ ತಂದೆಯಲ್ಲಿಯೇ ಆ ಮಮತೆಯನ್ನು ಕಂಡು ಉಂಡಿದ್ದೆ. ನನ್ನ ತಾಯಿ ಅವರನ್ನಗಲಿ ಹೋದನಂತರ ಅವರು ಎರಡ ನೆಯ ಮದುವೆಯ ವಿಚಾರ ಮಾಡಲಿಲ್ಲ. ನಿಜವಾಗಿಯೂ ಅದು ಅವರ ವಿಶಾಲ ಹೃದಯದ ಹಿರಿಮೆ. ನನ್ನ ಮೇಲೆ ಅವರ ಜೀವ. ನಾನೇ ಅವರಿಗೆ ಮಗಳು–ಮಗ, ಬಂಧು–ಬಳಗ ಎಲ್ಲವೂ ! ನನ್ನ ಯಾವ ಮಾತಿಗೂ ಅವರು ಅಡ್ಡ ಬರುತ್ತಿರಲಿಲ್ಲ. ಅದು ಕಾರಣವೇ ನನಗೆ ಬಿ. ಎ. ದ ವರೆಗೆ ಓದಲು ಸಾಧ್ಯವಾಯಿತು. ಊರ ಎಷ್ಟೋ ಜನರ ಬಾಯಿಗಳು ಕುಂಯ್‌ಗುಟ್ಟಿ ದರೂ, ಅವರು ನನ್ನನ್ನು ಕಾಲೇಜಿಗೆ ಕಳಿಸಿಯೇ ತೀರಿದರು. ಆದರೆ ಅದೇ ತಪ್ಪಾಯಿತೇನೋ ಎಂದು ಈಗ ಅನ್ನಿಸುತ್ತಲಿದೆ."

"ನಾನು ಕಾಲೇಜಿನಲ್ಲಿ ಓದುತ್ತಿರುವಾಗ ನನಗೆ ಯಾವುದೇ ತರದ ಅಡ್ಡಿ–ಅಡಚಣಿಗಳೂ ಬರಲಿಲ್ಲ. ಶಿಷ್ಯವೃತ್ತಿಯನ್ನು ಕಳೆದುಕೊಂಡುದುದು ನನಗೆ ನೆನಪಿಲ್ಲ. ನಾನು ಎಲ್ಲ ಗೆಳತಿಯರೊಂದಿಗೆ ತೀರ ಸರಳವಾಗಿ ಸಖ್ಯದಿಂದ ವರ್ತಿಸುತ್ತಿದ್ದೆ. ಅದರಿಂದ ನನಗೆ ಅನೇಕ ಗೆಳತಿಯರು ದೊರೆತರು. ಅಲ್ಲದೆ ಅನೇಕ ಗಂಡು ಹುಡುಗರೂ ನನ್ನನ್ನು ಮಾತನಾಡಿ ಸಲು ಯತ್ನಿಸಿದರು. ನನಗೇಕೋ ಗಂಡುಸೆಂದರೆ ಏನೋ ಎನಿಸುತ್ತಿತ್ತು. ನಾನು ಯಾರನ್ನೂ ಹೆಚ್ಚಿಗೆ ಹಚ್ಚಿಕೊಂಡಿರಲಿಲ್ಲ."

"ಒಮ್ಮೆ ನಮ್ಮ ಕಾಲೇಜ ಸಂತೋಷ ಕೂಟದಲ್ಲಿ ಮಾಡಿದ ಏಕಾಂಕ ನಾಟಕವೊಂದರಲ್ಲಿ ನಾನು ಚೆನ್ನಾಗಿ ಅಭಿನಯಿಸಿದೆನೆಂದು ಯಾರೋ ಒಬ್ಬನು ನನಗೊಂದು ಬೆಳ್ಳಿಯ ಪದಕವನ್ನು ಬಹುಮಾನವಾಗಿ ಕೊಟ್ಟನು. ಆದರೆ ನನಗೇಕೋ ಅದು ಸರಿಯೆನಿಸಲಿಲ್ಲ. ನಾನು ಕೂಡಲೇ, "ಈ

ಪದಕವನ್ನು ನನಗೆ ಬಹುಮಾನವಾಗಿ ಕೊಟ್ಟ ಮಹನೀಯರಿಗೆ ನಾನು ತುಂಬ ಋಣಿಯಾಗಿದ್ದೇನೆ. ಆದರೆ ಅದನ್ನು ಸ್ವೀಕರಿಸುವ ಅರ್ಹತೆ ನನಗೆ ಸಾಲದೆಂದು ತೋರುತ್ತದೆ. ಕಾರಣ ಅವರು ದಯಮಾಡಿ ತಿರುಗಿ ತೆಗೆದು ಕೊಳ್ಳಬೇಕು." ಎಂದು ಥಟ್ಟನೇ ಕೂಡಿದ ಸಭೆಯಲ್ಲಿ ನುಡಿದುಬಿಟ್ಟೆ. ಮೊದಲೇ ಕಾಲೇಜು ವಿದ್ಯಾರ್ಥಿಗಳು! ಅದರಲ್ಲಿ ಇಂಥದೇನಾದರೂ ಆದರೆ ಕೇಳಬೇಕೇ? ನನ್ನ ಕಿವಿಯ ಪಟಲಗಳೇ ಹರಿದು ಹೋಗುವವೋ ಎನ್ನು ವಂತಾಯ್ತು, ಅವರ ಒದರಾಟ–ಚೀರಾಟ ಕೇಳಿ. ನನಗೆ ಅಲ್ಲಿ ನಿಲ್ಲುವ ದಾಗಲಲ್ಲ. ಮನೆಗೆ ಓಡಿದವಳೇ ನನ್ನ ಕೋಣೆಯಲ್ಲಿ ಬಿದ್ದುಕೊಂಡಿದ್ದೆ. ನನಗಾಗ ಬಹಳೇ ಕೆಡಕೆನಿಸಿತು. ನಾನು ಮಾಡಿದುದು ತಪ್ಪಾಯಿತು ಎಂದುಕೊಂಡೆ. ಪಾಪ! ಅವನಿಗೆಷ್ಟು ಅವಮಾನವಾಗಿರಬೇಕು! ಆದರೆ.... ಆದರೇನು? ಕೊನೆಗೆ ನಾನೇ ಸಮಾಧಾನ ತಂದುಕೊಂಡೆ. 'ಅವನೂ ಹಾಗೆ ಮಾಡಬಾರದಿತ್ತು; ನಾನೂ ಹಾಗೆ ಮಾಡಬಾರದಿತ್ತು' ಎಂದು. ಇದಾದ ನಂತರ ನನ್ನ ಗೋಜಿಗೆ ಯಾರೂ ಬರಲಿಲ್ಲ. ಅಷ್ಟೇ ಸಾಕು ಎಂದುಕೊಂಡೆ. ಆಗ ನಾನು ಇಂಟರದಲ್ಲಿ ಓದುತ್ತಿದ್ದೆ."

"ನನಗೆ ಮೊದಲಿನಿಂದಲೂ ಕನ್ನಡ ವಿಷಯದ ಬಗ್ಗೆ ಅಭಿಮಾನ, ಆದರ, ಪ್ರೀತಿ. ಬಿ. ಎ. ಕ್ಕೆ ಕನ್ನಡವನ್ನೇ ಮುಖ್ಯವಿಷಯವನ್ನಾಗಿ ತುಂಬಿದೆ. ಅದೇ ವರ್ಷ ನಮ್ಮ ಕಾಲೇಜಿಗೆ ಕನ್ನಡದ ಹೊಸ ಪ್ರೊಫೆಸರ ರೊಬ್ಬರು ಬಂದಿದ್ದರು. ಅವರು ಬಿ. ಎ. ದಲ್ಲಿಯೂ ಎಮ್. ಎ. ದಲ್ಲಿಯೂ ಮೊದಲನೇ ತರಗತಿಯಲ್ಲಿ ಪಾಸಾಗಿದ್ದರಂತೆ. ಮತ್ತೂ ಏನೆಂದರೆ ಅವರು ನಮ್ಮ ಕಾಲೇಜಿನಲ್ಲಿಯೇ ವಿದ್ಯಾಭ್ಯಾಸವನ್ನು ಮುಗಿಸಿದ್ದರಂತೆ. ಕಾಲೇಜು ಪ್ರಾರಂಭವಾಗಿ ಮೊದಲನೇ ದಿನವೇ ಹೊಸ ಪ್ರೊಫೆಸರರ ಸಂಗಡ ಮಾತನಾಡುವ ಪ್ರಸಂಗ ಬಂದಿತು. ಕ್ಲಾಸಿನಲ್ಲಿ ಅವರು ನನ್ನನ್ನು ನೋಡಿದ ಕೂಡಲೇ ಏನೋ ಜ್ಞಾಪಿಸಿಕೊಂಡವರಂತೆ ಕಂಡಿತು. ಆದರೆ ನನಗೇನೂ ಅರ್ಥವಾಗಲಿಲ್ಲ."

"ಕನ್ನಡದ ಅಭ್ಯಾಸ ಬಲು ಸರಸ. ಅದರಲ್ಲಿಯೂ ನಮ್ಮ ಹೊಸ ಪ್ರೊಫೆಸರರ ಮುಖದಿಂದ ಕೇಳಿದರಂತೂ ಹೇಳತೀರದು, ಜೇನುಸವಿ ದಂತೆ. ಎಂದಾದರೊಮ್ಮೆ ಅವರು ಕ್ಲಾಸಿನಲ್ಲಿ ಕಾವ್ಯ ಓದಿ ತೋರಿಸುತ್ತಿ

ದ್ದರು. ಆಗ ನನಗೆ “ ಇವರು ದಿನಾಲು ಹೀಗೆಯೇ ಏಕೆ ಅಂದು ತೋರಿ ಸುವುದಿಲ್ಲ.? ” ಎಂದು ಅನ್ನಿಸುತ್ತಿತ್ತು. ಬಿ. ಎ. ಕ್ಕೆ ಕನ್ನಡ ಮುಖ್ಯ ವಿಷ ಯವಾಗಿ ತೆಗೆದುಕೊಳ್ಳುವವರು ತುಸು ವಿರಳ. ಈಗ ರಾಜಮಾರ್ಗದಂತೆ ತೋರುವ ಅರ್ಥ ಶಾಸ್ತ್ರಕ್ಕೇ ಎಲ್ಲರೂ ಹೋಗುವರು ! ಹೀಗಾಗಿ ನಮ್ಮ ಕ್ಲಾಸಿನಲ್ಲಿ ಹೆಚ್ಚೆಂದರೆ ಸುಮಾರು ಹದಿನೈದು ಜನ ಇದ್ದೆವು. ಆದ್ದರಿಂದ ನಮ್ಮೆಲ್ಲರ ವ್ಯಕ್ತಿಶಃ ಪರಿಚಯವಾಗಲಿಕ್ಕೆ ಶಕ್ಯವಾಯಿತು. ಅದರಂತೆ ನಮ್ಮ ಪ್ರೊಫೆಸರರ ಮತ್ತು ನನ್ನ ಪರಿಚಯವು ಕೂಡ ಆಯಿತು. ”

“ ನಾನು ಜ್ಯೂನಿಯರದಿಂದ ಸೀನಿಯರಕ್ಕೆ ಜಿಗಿದೆ. ಪರೀಕ್ಷೆಯೂ ಶೀರ ಸಮೀಪಕ್ಕೆ ಬಂದಿದ್ದಿತು. ನನ್ನ ಅಭ್ಯಾಸವೂ ಚೆನ್ನಾಗಿ ಆಗಿದ್ದಿತು. ಏನಾದರೂ ತಿಳಿಯದಿದ್ದರೆ ನಾನು ಆಗಾಗ ಪ್ರೊಫೆಸರರ ಕೋಣೆಗೆ ಹೋಗಿ ತಿಳಿದುಕೊಂಡು ಬರುತ್ತಿದ್ದೆ. ಅವರು ಯಾವಾಗಲೂ ನಗುಮೊಗದಿಂದಲೇ ಇರುತ್ತಿದ್ದರು. ಮನೆಯಲ್ಲಂತೂ ಯಾವ ಆಡಂಬರವೂ ಇಲ್ಲದೆ ವಿನಯ ದಿಂದ ವರ್ತಿಸುತ್ತಿದ್ದರು. ಆದರಿಂದ ನಾನು ಯಾವ ಸಂಕೋಚವೂ ಇಲ್ಲದೆ ಅವರಿಗೆ ಭೆಟ್ಟಿಯಾಗುತ್ತಿದ್ದೆ. ಅನೇಕ ಸಾರೆ ಏನೂ ಕಾರಣವಿಲ್ಲದೆ ಕೂಡ ಅವರ ಕಡೆಗೆ ಹೋಗುತ್ತಿದ್ದೆ. ಆದೇಕೋ ತಿಳಿಯದು. ಆದರೆ ಹಾಗೆ ಹೋಗಿ ಭೆಟ್ಟಿಯಾಗಿ ಅವರ ಸಂಗಡ ಮಾತನಾಡಿ ಬರಬೇಕೆಂದು ಅನ್ನಿಸುತ್ತಿತ್ತು. ”

“ ನಮ್ಮ ಪರೀಕ್ಷೆಯೂ ಆಯಿತು. ನನ್ನ ಎಲ್ಲ ವಿಷಯಗಳೂ ಚೆನ್ನಾಗಿಯೇ ಆಗಿದ್ದುವು. ಹೆಚ್ಚಿಗೆ ಗುಣಗಳನ್ನು ದೊರಕಿಸುವ ಆಶೆಯೂ ಇದ್ದಿತು. ”

ಅದೇಕೋ ಒಂದರೆನಿಮಿಷ ಲಲಿತಮ್ಮನವರು ತಡೆದರು. ........

“ ಅಕ್ಕಾ, ನಾವು ಹಿತ್ತಲಲ್ಲಿ ಒಂದು ಗಿಡದ ಸಸಿಯನ್ನು ಊರಿದೆ ವೆಂದು ತಿಳಿದುಕೊಳ್ಳಿರಿ. ಅದು ದಿನಾಲು, ಅದೇಕೆ ಕ್ಷಣಕ್ಷಣಕ್ಕೆ ಬೆಳೆಯು ತ್ತಲೇ ಇರುತ್ತದಲ್ಲವೇ ? ಆದರೆ ಅದರ ಬೆಳವಣಿಗೆ ಮಾತ್ರ ನಮ್ಮ ಕಣ್ಣಿಗೆ ಕಾಣುವುದಿಲ್ಲ. ಕೆಲಕಾಲದ ನಂತರ ಅದು ಬೇರೂರಿ ಸಾಕಷ್ಟು ಬೆಳೆದ ನಂತರವೇ ನಮಗೆ ಒಮ್ಮೆಲೇ ಅರಿವಾಗುವುದು. ‘ ಅದೆಷ್ಟು ಬೆಳೆದೂ ದೊಡ್ಡದಾಯಿತಲ್ಲ ! ’ ಎಂದು, ಅಲ್ಲವೇ ? ” .

ಸಾವಿತ್ರಮ್ಮ ಮಾತನ್ನೇನೂ ಆಡದಿದ್ದರೂ ಸಮ್ಮತಿಸೂಚಕವಾಗಿ ತಮ್ಮ ತಲೆಯನ್ನು ಅಲುಗಾಡಿಸಿದರು. ಲಲಿತಮ್ಮನವರು ಮತ್ತೆ ಹೇಳ ತೊಡಗಿದರು. "ಸಾವಿತ್ರಮ್ಮಾ, ನಿಮ್ಮ ಮುಂದೆ ನಾನೇನೂ ಬಚ್ಚಿಡು ವುದಿಲ್ಲ. ಆ ಸಸಿಯು ಬೆಳೆದು ದೊಡ್ಡದಾಗುವಂತೆಯೇ........" ಅವರ ಧ್ವನಿ ಅದೇಕೋ ಬೇರೆಯಾಯಿತು. "ನನ್ನ ಮತ್ತು ರಾಜುವಿನ ಪರಿ ಚಯ ಸ್ನೇಹದಲ್ಲಿ, ಸ್ನೇಹ ಮಮತೆಯಲ್ಲಿ, ವಿಶ್ವಾಸದಲ್ಲಿ, ಪ್ರೀತಿಯಲ್ಲಿ ಕೊನೆಗೆ ಪ್ರಣಯದಲ್ಲಿ ಮಾರ್ಪಾಡಾಯಿತು."

"ರಾಜು ಯಾರು, ನಿಮ್ಮ ಪ್ರೊಫೆಸರರೇ ?" ಸಾವಿತ್ರಮ್ಮ ನಡು ವೆಯೇ ಕೇಳಿದರು.

"ಹೌದು. ಅವರೇ. ನಮ್ಮ ಕನ್ನಡದ ಪ್ರೊಫೆಸರ ಆರ್. ಎಸ್. ಹೊನ್ನಾವರ. ಅದು ಹಾಗೆ ಹೇಗಾಯಿತು ಮತ್ತು ಏಕೆ ಆಯಿತು ನಾನರಿಯೆ. ಆದರೂ ಆಯಿತು ಇದು ಮಾತ್ರ ನಿಜ. ಅದು ತಪ್ಪೋ, ಒಪ್ಪೋ ನನಗಾಗ ತಿಳಿಯಲೂ ಇಲ್ಲ; ತಿಳಿಯಬೇಕೆಂದು ನಾನು ವಿಚಾರಿಸಲೂ ಇಲ್ಲ. ಒಂದು ವೇಳೆ ವಿಚಾರಿಸಿದ್ದರೂ ಅದನ್ನು ಬಿಡಲಿಕ್ಕೆ ಬರುತ್ತಿತ್ತೋ ಇಲ್ಲವೋ ತಿಳಿಯದು. ........ ದಿನಾಲು ಅವರನ್ನು ಕಾಣಬೇಕೆನ್ನಿಸುತ್ತಿತ್ತು. ಮನದಲ್ಲಿ ಯಾವಾಗಲೂ ಅವರ ವಿಚಾರವೇ ವಿಚಾರವಾಯಿತು. ಯಾವಾಗಲೂ ಅವರ ಹತ್ತಿರವೇ ಇರಬೇಕೆಂದು ಮನವು ತವಕಪಡುತ್ತಿತ್ತು. ಅವರೂ ಹಾಗೆಯೇ ಹೇಳುತ್ತಿದ್ದರು. ಮುನ್ನ ಜಾವಿಗೆ ಉಲಿಯಲನುವಾದ ಹಕ್ಕಿಯಂತೆ ದಿನಾಲು ನಾನು ಅವರ ದಾರೀ ಕಾಯುತ್ತಿದ್ದೆ. ಪ್ರತಿದಿನ ಸಾಯಂಕಾಲ ತಾಸೆರಡು ತಾಸು ಅವರೊಡನೆ ಕಳೆಯದಿದ್ದರೆ ಮನಕ್ಕೆ ನೆಮ್ಮದಿಯಿರುತ್ತಿರಲಿಲ್ಲ. ಕೊನೆಗೆ ಒಬ್ಬರನ್ನೊಬ್ಬರು ಅಗಲಿ ಇರಲಾರೆ ವೆಂಬುದನ್ನು ಇಬ್ಬರೂ ಮನಗಂಡೆವು. ಅದೆಲ್ಲವೂ ಹಾಗೇಕಾಯಿತೋ ನನಗೆ ಈಗಲೂ ತಿಳಿಯದು! ಗಂಡುಸೆಂದರೆ ನನಗೆ ಮೊದಲಿನಿಂದಲೂ ಒಂದು ಬಗೆಯ ತಿರಸ್ಕಾರವಿತ್ತು. ಆದರೆ ರಾಜುವಿನ ಬಗೆಗೆ ಅದೆಲ್ಲವೂ ಪಲ್ಲಟವಾಯಿತು. ವಿಧಿಯೇ ಹಾಗೆ ಮಾಡಿಸಿತೇನೋ! ಹಾಗಾಗದಿದ್ದರೆ ಅದೆಷ್ಟು ಚೆನ್ನಾಗಿತ್ತೆಂದು ಈಗ ಅನ್ನಿಸುತ್ತಲಿದೆ. ಆದರಿಂದಾದಷ್ಟಪಾಯ ವೆಷ್ಟು.... ? .... ಹಾಯ್." ಅವರ ಮುಖದಿಂದ ಮುಂದೆ ಶಬ್ದಗಳು

ಬರಲಿಲ್ಲ. ದುಃಖ ಮತ್ತೆ ಉಕ್ಕಿಬಂತು. ದಿಂಬಿಗೊರಗಿ ಗೋಡೆಯ ಕಡೆಗೆ ಮುಖ ಹೊರಳಿಸಿದರು. ಸಾವಿತ್ರಮ್ಮನ ಕೈ ಅವರ ಬೆನ್ನ ಮೇಲೆ ಮೆಲು ವಾಗಿ ಆಡುತ್ತಲಿತ್ತು.

ಐದು-ಹತ್ತು ನಿಮಿಷಗಳ ತರುವಾಯ ಲಲಿತಮ್ಮನವರ ದುಃಖದ ಆವೇಗವು ತುಸು ಕಡಿಮೆಯಾಯಿತು. ಮತ್ತೆ ಹೇಳತೊಡಗಿದರು. “ ಪರೀಕ್ಷೆ ಮುಗಿದ ನಂತರ ನಮ್ಮ ತಂದೆಯವರು ನನ್ನ ಮದುವೆಯನ್ನು ಮಾಡ ಬೇಕೆಂದು ವಿಚಾರಿಸಿದ್ದರಂತೆ, ಅದರಂತೆ ನನ್ನ ಮುಂದೆಯೂ ಆ ಮಾತ ನ್ನಾಡಿದರು. ಅದಕ್ಕೆ ಏನು ಹೇಳಲಿಕ್ಕೂ ನನಗೆ ತಿಳಿಯಲಿಲ್ಲ. ಬಾಯಿ ಯಿಂದ ಮಾತುಗಳೇ ಬರಲಿಲ್ಲ. ತಂದೆಯವರು ಒಂದೆರಡು ನಿಮಿಷಗಳ ತರುವಾಯ ಅಲ್ಲಿಂದ ಹೊರಟು ಹೋದರು. ನನ್ನ ಎದೆಯಲ್ಲಿ ಏನೋ ಒಂದು ತೆರನಾದ ವೇದನೆಯಾಯಿತು. ಅದನ್ನು ಯಾರ ಮುಂದೆ ಹೇಳಲಿ? ಹೇಗೆ ಹೇಳಲಿ? ಹಡೆದವ್ವನಾದರೂ ಇದ್ದಿದ್ದರೆ........! ನನ್ನಂಥ ಅಸಹಾಯ್ಯ ಸ್ಥಿತಿ ಅದಾರಿಗೂ ಬರದಿರಲಿ. ಮರುದಿನವೇ ಯಾರೋ ನನ್ನನ್ನು ‘ನೋಡ ಲಿಕ್ಕೆ’ ಬಂದರು. ದೊಡ್ಡ ಜಮೀನುದಾರರಂತೆ, ಮನೆಯಲ್ಲಿ ಬೆಳ್ಳಿ-ಬಂಗಾರ ಸಾಕಷ್ಟಂತೆ, ಸುಶಿಕ್ಷಿತರಂತೆ. ಹೀಗೆಯೇ ಏನೇನೋ ಹೇಳಿದರು. ಆದರೆ ಅದೆಲ್ಲವೂ ನನಗೆ ಅರ್ಥವಾಗಲಿಲ್ಲ. ”

“ ಅವರು ಹೋದ ನಂತರ ತಂದೆಯವರು ನನ್ನ ಹತ್ತಿರ ಬಂದು, ‘‘ ಮಗು, ಏನೆನ್ನುತ್ತೀ? ” ಎಂದು ಕೇಳಿದರು. ಆಗ ಮಾತ್ರ ನನ್ನಿಂದ ತಡೆಯಲಾಗಲಿಲ್ಲ. ದೊಡ್ಡದನಿ ತೆಗೆದು ಅಳತೊಡಗಿದೆ. ಅವರು ಗಾಬರಿಯಾಗಿ ‘‘ ಹಾಗೇಕೆ ಹುಚ್ಚಿಯಂತೆ ಮಾಡುತ್ತಿರುವೆ? ಮದುವೆಯಾದಾಕ್ಷಣಕ್ಕೆ ನಾನೇನು ನಿನ್ನನ್ನು ಬಿಟ್ಟುಬಿಡುತ್ತೇನೆಯೆ? ನೀನು ಇಷ್ಟೆಲ್ಲಾ ಕಲಿತುದು ವ್ಯರ್ಥ ನೋಡು ......” ಎಂದರು. ನಾನು “ ಕಾಕಾ, ನಾನೀಗ ಮದುವೆ ಒಲ್ಲೆ. ” ಎಂದು ಹೇಗೋ ಹೇಳಿದೆನು. ಅವರು ಅದನ್ನು ಲಕ್ಷ್ಯಕ್ಕೆ ತಾರದೆ ‘‘ ಹುಚ್ಚಿ ” ಎಂದಿಷ್ಟೇ ನುಡಿದು, ಮಾತನ್ನು ಬೇರೆ ವಿಷಯದ ಕಡೆಗೆ ತಿರುಗಿಸಲು ಯತ್ನಿಸಿದರು. ”

“ ಮುಂದೆ ನಾಲ್ಕೈದು ದಿನಗಳ ವರೆಗೆ ನಾನು ಮನೆಬಿಟ್ಟು ಎಲ್ಲಿಯೂ ಹೋಗಿರಲಿಲ್ಲ. ಮನವು ರಾಜುವನ್ನು ಕಾಣಬೇಕೆಂದು ಒಂದೇ ಸವನೇ

ಹಾತೊರೆಯುತ್ತಿತ್ತು. ಆದರೆ ಕಾಲುಗಳೇ ಏಳಲಿಲ್ಲ. ಏನೋ ಹುಚ್ಚಿಯಂತಾಗಿ ಆ ನಾಲ್ಕು ದಿನಗಳನ್ನು ಹೇಗೋ ಕಳೆದೆ. ತಂದೆಯವರು ಅದೆಲ್ಲಕ್ಕೂ ಬೇರೆ ಅರ್ಥವನ್ನೇ ಕಲ್ಪಿಸಿಕೊಂಡರು. " ಎಲ್ಲವನ್ನೂ ಅವರ ಮುಂದೆ ಹೇಳಿ ಬಿಡಲೇ " ಎಂದೆನ್ನಿಸಿತೊಮ್ಮೆ. ಆದರೆ ಧೈರ್ಯ ಸಾಲಲಿಲ್ಲ. ಅಕ್ಕಾ, ತಾಯಿಯನ್ನು ಕಳೆದುಕೊಂಡ ಪರದೇಶಿ ನಾನು ಮನದ ದುಗುಡವನ್ನು ಯಾರ ಮುಂದೆ ಹೇಳಲಿ? ಹಾಗೇ ಮನದಲ್ಲಿಯೇ ಕೊರಗುತ್ತಲಿದ್ದೆ. "

" ಒಂದಿನ ಮಧ್ಯಾಹ್ನ ಸುಮಾರು ಒಂದು ಗಂಟೆಯಾಗಿರಬಹುದು. ತಂದೆಯವರು ಒಮ್ಮೆಲೇ ನನ್ನನ್ನು ಕೂಗುತ್ತ ಬಂದರು. ಮುಖ ತುಸು ಉಗ್ರವೇ ಆಗಿತ್ತು. " ನೀನೀಗ ಬಹಳೇ ಜಾಣಳಾಗಿದ್ದೀ. ಏನೋ ತಾಯಿಯಿಲ್ಲದ ಮಗು ಎಂದು ಬೆಳೆಯಿಸಿದ್ದಕ್ಕೆ ......" ಅವರ ಕಣ್ಣು ಕೆಂಡವನ್ನು ಕಾರುವಂತಿದ್ದವು. ನನಗೆ ಅವರ ಕೋಪದ ಅರ್ಥವೇ ಆಗಲಿಲ್ಲ. ಕೇಳುವ ಧೈರ್ಯವೂ ಆಗಲಿಲ್ಲ. ಅವರು ನನ್ನ ಕಡೆಗೆ ಒಂದು ಪಾಕೀಟನ್ನು ಒಗೆದು, " ಇದು ನೋಡು. ಏನಿದು? ಅವನ್ಯಾರು ಮಂಗಮಗ? ಪ್ರೊಫೆಸರನಾಗಿದ್ದಾನಂತೆ ಬುದ್ಧಿಯಿಲ್ಲವೆ? ಜನ ಗುಜುಗುಜು ಮಾತನಾಡುತ್ತಲೇ ಇತ್ತು. ಆದರೂ ನನ್ನ ಮಗಳು ಹಾಗೆಂದೂ ಮಾಡಲಾರಳೆಂದು ತಿಳಿದಿದ್ದೆ. ಇಂದು ನೀನು ಸರಿಯಾಗಿ ಬುದ್ಧಿಗಲಿಸಿದೆ. ಯಾವ ಜಾತಿಯೋ, ಏನು ಗೋತ್ರವೋ? ಊರಾವುದೋ, ಕೇರಿಯಾವುದೋ? ಪ್ರೇಮವಂತೆ ಪ್ರೇಮ! ನಿನ್ನ ಗಂಡನನ್ನು ನೀನೇ ಹುಡುಕಿಕೊಳ್ಳಲಿಕ್ಕೆ ನಾನೇನು ಸತ್ತಿರುವೆನೇ? ....... ನನ್ನ ಹತ್ತಿರ ಇಂತಹದೆಲ್ಲ ನಡೆಯದು. ನಿನಗೆ ಇಷ್ಟು ಕಲಿಸಿದ್ದೇ ತಪ್ಪಾಗಿದೆ ಮೊದಲು. ನೀನೇನು ಮಾಡಿ? ಹಾಗೆಲ್ಲಾ ಆಗದು ನೋಡು. ಹಾಂ. ಮನೆ ಬಿಟ್ಟು ಹೊರಗೆ-ಗಿರಗೆ ಹೋಗೀಯೋ ನೋಡಿಕೋ. .... " ಎಂದು ಕಾಲು ಧಡ ಧಡ ಬಡಿಯುತ್ತ ಹೊರಗೆ ಹೋದರು! ನಾನು ಮೂಕಿಯಂತೆ ಹಾಗೆಯೇ ಕುಳಿತಿದ್ದೆ. ಎದ್ದು ಪತ್ರ ಕೂಡ ಬೇಗನೇ ನೋಡಲಾಗಲಿಲ್ಲ. ........ "

" ಅದು ನಿಮ್ಮ ರಾಜುವಿನ ಪತ್ರವಾಗಿತ್ತೆ? " ಸಾವಿತ್ರಮ್ಮ ಕೇಳಿದರು. "

ಲಲಿತಮ್ಮನ ಕಣ್ಣುಗಳಲ್ಲಿ ಉದುರಲಾರದ ಎರಡುತೊಟ್ಟು ನೀರು ಮಿನುಗುತ್ತಲಿದ್ದುವು. ಅವರಿಂದ ಏನೂ ಮಾತು ಬರಲಿಲ್ಲ. ತಲೆದಿಂಬಿನ ಕೆಳಗೆ ಇದ್ದ ಎರಡು ಪತ್ರಗಳನ್ನು ತೆಗೆದು ಸಾವಿತ್ರಮ್ಮನ ಕೈಗಿತ್ತರು. ಅವರ ಹತ್ತಿರ ಆ ಪತ್ರಗಳು ಇರುತ್ತಿದ್ದುವೆಂಬುದನ್ನು ಅನೇಕ ಸಲ ಸಾವಿತ್ರಮ್ಮನವರು ಕಂಡಿದ್ದರು.

ಸಾವಿತ್ರಮ್ಮನ ಕುತೂಹಲ ಕೆರಳಿತು. ಪತ್ರ ಮನದಲ್ಲಿಯೇ ಓದ ತೊಡಗಿದರು.

" ಮುದ್ದು ಲಲಿತಾ,

ನನ್ನ ಮೇಲೆ ಇಷ್ಟು ಕೊಪವೇ? ಐದು ದಿನಗಳಾದರೂ ಒಮ್ಮೆಯೂ ಕಾಣಬೇಡವೇ? ಅಂಥ ಅಪರಾಧವಾದರೂ ಯಾವುದು? ತಲೆಯಲ್ಲಿ ಎಲ್ಲಿಲ್ಲದ ಕೆಟ್ಟ ವಿಚಾರಗಳು ಬಂದು ಇನ್ನಿಷ್ಟು ಅಧೀರನನ್ನಾಗಿ ಮಾಡುತ್ತಲಿವೆ. ನಿನ್ನ ಪ್ರಕೃತಿ ಸರಿಯಾಗಿದೆಯಷ್ಟೆ?

ಮರುದಿನ ಇಬ್ಬರೂ ಶೋಕ್ಕೆ ಹೋಗಬೇಕೆಂದುದು ನೆನಪಿದೆಯೇ? ಇಷ್ಟೇಕೆ ಕಠೋರಳಾದೆ ಲಲಿತಾ? .... ಇಲ್ಲ. ನನ್ನ ಲಲಿತೆ ಹಾಗೆಂದಿಗೂ ಮಾಡಲಾರಳು. ಹಾಗಾದರೆ ನಾನೇನು ಅರ್ಥ ಮಾಡಿಕೊಳ್ಳಲಿ? ನನ್ನ ಮನವನ್ನು ಪರೀಕ್ಷಿಸಲು ಹೀಗೆ ಮಾಡಿಲ್ಲವಷ್ಟೇ? ಲಲಿತಾ ನಿನಗೆ ಹೇಗೆ ಹೇಳಲಿ? .... ನನ್ನದು ನಿಷ್ಕಾಮ ಪ್ರೇಮ. ಈಗೆರಡು ವರ್ಷಗಳ ಹಿಂದೆಯೇ ನಾನದನ್ನು ತಿಳಿದುಕೊಂಡಿದ್ದೇನೆ. ಅಂದು ನೀನು ಕಾಲೇಜ ಗ್ಯಾದರಿಂಗದಲ್ಲಿ ಪಾತ್ರವಹಿಸಿದ್ದೆಯಲ್ಲ., ಆಗ ಮನದುಂಬಿ ಹೃದಯದಂತರಾಳದಿಂದ ಉಕ್ಕಿಬಂದ ನಿಷ್ಕಾಮ ಪ್ರೇಮದ ಕಾಣಿಕೆಯೆಂದು ನಿನಗೊಂದು ಪದಕವನ್ನರ್ಪಿಸಿದ್ದೆ. ಆದರೆ ನೀನದಕ್ಕೆ ಬೇರೆ ಅರ್ಥ ಕಲ್ಪಿಸಿಕೊಂಡೆ. ನೀನು ನನ್ನನ್ನು ತಪ್ಪು ತಿಳಿದುಕೊಂಡೆಯಲ್ಲಾ ಎಂದು ನನಗಾದ ದುಗುಡ ಎಂತಹದು ಗೊತ್ತೇ.......?

ಲಲಿತಾ, ನನಗೀ ಜಗತ್ತಿನಲ್ಲಿ ನಿನ್ನ ಪ್ರೇಮವನ್ನು ಬಿಟ್ಟರೆ ಇನ್ನಾವುದೂ ಹಿತವಾದುದಿಲ್ಲ. ತಂದೆ-ತಾಯಿಯನ್ನು ಕಂಡುದುದೂ ಕೂಡ

ನೆನಪಿಲ್ಲ. ಯಾರಲ್ಲಿಯೋ ಬೆಳೆದು, ಯಾರ ದಯೆಯಿಂದಲೋ ವಿದ್ಯಾಭ್ಯಾಸವಾಯಿತು. ನಿರಾಶೆಯ ಮಳಲುಗಾಡಿನಲ್ಲಿ ನಡೆಯುವಾಗ ಲಲಿತಾ, ನೀನೇ ನನಗೆ ಓಯಾಸಿಸದಂತೆ ಕಂಡೆ. ಅಂಥ ನೀನೇ ನನ್ನನ್ನು ತೊರೆದರೆ ನನ್ನ ಗತಿಯೇನು ಬಲ್ಲೆಯಾ? ........... ಬೇಡ. ಅಂಥ ವಿಚಾರವೇ ಬೇಡ. ಒಬ್ಬರನ್ನಗಲಿ ಇನ್ನೊಬ್ಬರು ಇರಲಾರೆವೆಂಬುದನ್ನು ನನ್ನ ಮನವಂತೂ ಕಂಡುಕೊಂಡಿದೆ!

ಹೆಚ್ಚು ಬರೆಯಲಾರೆ ಲಲಿತಾ, ನನ್ನ ಮನವನ್ನು ಸಂಪೂರ್ಣ ಅರಿತ ನಿನಗೆ ಹೆಚ್ಚಿಗೆ ಏನು ಬರೆಯಲಿ? ಒಂದು ವೇಳೆ ನನ್ನಿಂದೇನಾದರೂ ತಪ್ಪಾಗಿದ್ದರೆ ಕ್ಷಮಿಸಲಾರೆಯಾ? ನಾನು ನಿನ್ನನ್ನು ವಂಚಿಸುವೆನೆಂದು ಸಂಶಯ ಬಂದಿದೆಯೋ? ಹೇಗೆ ಹೇಳಲಿ? ನನಗೆ ಜೀವನದಲ್ಲಿ ನನ್ನ ಪ್ರಾಣವನ್ನುಳಿದರೆ ಬೇರೆ ಇನ್ನಾವ ಸೊತ್ತೂ ಇಲ್ಲ. ಅದನ್ನೇ ನಿನಗರ್ಪಿಸಲು ಸದಾ ಸಿದ್ಧ ನಾನು! ಅಂಥವ ನಿನ್ನನ್ನು ವಂಚಿಸಬಹುದೆ?

ಏನೋ ಹುಚ್ಚನಂತೆ ಬರೆದೆ. ಕ್ಷಮಿಸು. ಆದರೆ ಒಂದು ಮಾತು ಲಲಿತಾ, ನೀನು ನಾಳೆ ಸಾಯಂಕಾಲದೊಳಗೆ ಭೆಟ್ಟಿಯಾಗಬೇಕು. ಇಲ್ಲದಿದ್ದರೆ ........! ಇಲ್ಲ. ನೀನು ಭೆಟ್ಟಿಯಾಗದಿರಬಹುದೇ?

ಮನವು ಬಹಳೇ ಕಾತರಗೊಂಡಿದೆ.

ನಿನ್ನ ಪ್ರೇಮ ಭಿಕ್ಷುಕ,

ರಾಜು".

ಪತ್ರದಲ್ಲಿಯ ಒಂದೊಂದು ಮಾತನ್ನು ಓದುತ್ತಿರುವಂತೆ ಲಲಿತಮ್ಮ-ರಾಜು ಇವರಲ್ಲಿಯ ಪ್ರೇಮ ಎಷ್ಟು ಆಳವಾಗಿತ್ತೆಂಬುದರ ಅರಿವು ಸಾವಿತ್ರಮ್ಮನವರಿಗಾಗುತ್ತಿತ್ತು. ಮೊದಲನೆಯ ಪತ್ರ ಓದಿ ಮುಗಿಸಿ, ಎರಡನೆಯದನ್ನು ಓದಲನುವಾದಾಗ ಅವರ ಮುಖದಿಂದ ನಿಟ್ಟುಸಿರೊಂದು ಸುಯ್ದಿತು.

" ಲಲಿತಾ s,

ನಿನ್ನ ಪತ್ರವನ್ನು ಬರಸಿಡಿಲಿನಂತೆ ಬರಮಾಡಿಕೊಂಡೆ. ಓದಿದೆ. ಓದುತ್ತಿರುವಂತೆಯೇ ತಲೆ ಗರಗರ ತಿರುಗಿದಂತಾಯಿತು. ನಿಮ್ಮ ತಂದೆಯವರು ಏನೂ ವಿಚಾರಿಸದೆ, ಅದಾವ ಕಾರಣದಿಂದ ನನ್ನನ್ನು ತಪ್ಪು ತಿಳಿದುಕೊಂಡರೋ ನಾನರಿಯೆ. ಜನ ನನ್ನ ಸಲುವಾಗಿ ಅವರಿಗೇನು ಹೇಳಿದರೋ, ಯಾಕೆ ಹೇಳಿದರೋ ಅದನ್ನೂ ಊಹಿಸಲಾರೆ. ಹೋಗಲಿ, ಅವರಿಗಾದರೂ ಏಕೆ ತಪ್ಪುಎನ್ನಬೇಕು? ನನ್ನ ಹಣೆಯಲ್ಲಿ ಹಾಗೇ ಬರೆದಿರಬೇಕು. .

ಲಲಿತಾ, ನಿಜವಾಗಿಯೂ 'ನಾವಿಬ್ಬರೂ ಈ ಜನ್ಮದಲ್ಲಿ ಇನ್ನೆಂದಿಗೂ ಕೂಡಲಾರೆವೇ?' ಹಾಗೆ ಬರೆಯಲಿಕ್ಕೆ ನಿನ್ನ ಮನವು ಒಪ್ಪಿತೇ? ಈ ಹೊಡೆತ ಹೇಗೆ ಸಹಿಸಲಿ?

ಈಗ ನಾನೇನೂ ಹೆಚ್ಚಿಗೆ ಬರೆಯಬಯಸುವುದಿಲ್ಲ. ಇದು ನನ್ನ ಕೊನೆಯ ಪತ್ರ. ಲಲಿತಾ, ಒಂದೇ ಒಂದು ಸಲವಾದರೂ ನಿನ್ನನ್ನು ನೋಡಬೇಕೆಂದು ಮನವು ಹಂಬಲಿಸುತ್ತಿತ್ತು, ಹಂಬಲಿಸುತ್ತಲಿದೆ. ಆದರೆ, ನೀನೇ ಬರೆದಂತೆ ಅದು ಅಸಾಧ್ಯವಲ್ಲವೇ? ನನಗೂ ಹಾಗೇ ಅನ್ನಿಸುತ್ತಲಿದೆ. ನೀನು ಈ ಪತ್ರ ಓದುತ್ತಿರುವಾಗಲೇ ನಾನು ದೂರ ದೂರ ಅತಿ ದೂರ ಲಲಿತಾ, ಯಾರ ಭಯವೂ ಇಲ್ಲದ ಶಾಂತ ಸ್ಥಳವನ್ನು ಹುಡುಕಲು ಹೊರಟು ಬಿಟ್ಟಿರುವೆನು.

ನನ್ನ ಕೊನೆಯ ಒಂದೇ ಇಚ್ಛೆ ಲಲಿತಾ, ಅದನ್ನೂ ಪೂರೈಸಲಾರೆಯಾ? ಈಗ ನಾನೇನೋ ಮಾಡುತ್ತಿರುವೆನು. ಅದು ತಪ್ಪೋ ಒಪ್ಪೋ ನಾನು ವಿಚಾರಿಸಿಲ್ಲ. ವಿಚಾರಿಸಿ ತಿಳಿಯುವುದೂ ಬೇಡವಾಗಿದೆ. ನೀನೂ ಅದೇ ದಾರಿ ತುಳಿಯಬಾರದೆಂದು ನನ್ನಿಚ್ಛೆ. ನಿನ್ನ ಜೀವನವನ್ನು ನಿಮ್ಮ ತಂದೆಯವರಿಗೆ ಯೋಗ್ಯ ಕಂಡ ದಾರಿಯಲ್ಲಿ ನೂಕಲು ಯತ್ನಿಸು. ನನ್ನನ್ನು ಮರೆತುಬಿಡು.

ಕೊನೆಯದಾಗಿ ಇನ್ನೊಮ್ಮೆ ನಿನ್ನ ಮುದ್ದು ಹೆಸರನ್ನಾದರೂ ಕೂಗಬೇಕೆನ್ನಿಸುತ್ತಲಿದೆ. ಲ ಲಿ ತಾ s s s ....

ಎಂದೆಂದಿಗೂ ನಿನ್ನವನಾಗಲಸಾಧ್ಯನಾದ
ದುರ್ದೈವಿ -- ರಾಜು. "

ಪತ್ರ ಓದುತ್ತಿರುವಂತೆಯೇ ಸಾವಿತ್ರಮ್ಮನವರ ಕಣ್ಣುಗಳಿಂದ ನೀರು, ಪ್ರವಾಹದ ಸಮೀಪದ ಉಸುಕನ್ನು ಕೆದರಿದಾಗ ಬಸಿಯೊಡೆಯುವ ನೀರಿನಂತೆ ಹಸಿಯೊಡೆಯುತ್ತಲಿತ್ತು! ಹೃದಯದಲ್ಲಿ ಅದೇನೋ ವೇದನೆಯಾಗುತ್ತಲಿತ್ತು. ಎರಡು ನಿಮಿಷ ಅವರಿಗೆ ಎಲ್ಲವೂ ಶೂನ್ಯವೆನಿಸಿತು.

ತರುವಾಯ ಒಮ್ಮೆಲೇ, ಹೃದಯದಲ್ಲಿ ಅಡಗಿದ ಅದಾವುದೋ ಅಂತಃಕರುಣದ ಆವೇಗ ಹೊರಚಿಮ್ಮಿತು. ಶಾಂತಮಯವಾದ ಕೋಣೆಯನ್ನೇ ನಡುಗಿಸುವಂಥ ಧ್ವನಿಯಿಂದ " ಲಲಿತಮ್ಮಾ ॥ ॥ " ಎಂದು ಕೂಗಿದರು. ಮುಂದೆ ಮಾತು ಬರಲಿಲ್ಲ! ಮೌನವಿರೆದ್ದಿತ್ತು! ........ ಎರಡೂ ಜೀವಿಗಳೂ ಚಿಕ್ಕ ಮಕ್ಕಳಂತೆ ಹಾಗೇ ಅಳುತ್ತ ಈ ಜಗತ್ತನ್ನು ಅದೆಷ್ಟೋ ಕಾಲ ಮರೆತಿದ್ದುವು!

ಅತ್ತು ಅತ್ತು ಇಬ್ಬರ ಕಣ್ಣುಗಳೂ ಕೆಂಪಾಗಿದ್ದುವು. ಹೃದಯದಲ್ಲಿಯ ದುಃಖ ಕರಗಿ ಕಣ್ಣೀರಾಗಿ ಹೊರಹೊಮ್ಮಿತ್ತು. ಲಲಿತಮ್ಮನ ಮನಸ್ಸು ಮತ್ತೆ ಕಲ್ಲಿಗಿಂತ ಬಿರುಸಾಗಿದ್ದಿತು. ಯಾವ ದುಃಖವನ್ನೂ ಎದುರಿಸುವ ಶಕ್ತಿ ಬಂದವರಂತೆ ಮುಖಮುದ್ರೆ ಗಂಭೀರವಾಗಿದ್ದಿತು!

"ಇನ್ನು ನನ್ನ ಜೀವನದ ಕೊನೆಯ ಅಂಕನ್ನಷ್ಟು ಕೇಳಿರಿ ಸಾವಿತ್ರಮ್ಮ ........" ಲಲಿತಮ್ಮನ ಧ್ವನಿಯಲ್ಲಿ ಸಂಪೂರ್ಣ ಸ್ಥಿರತೆ ನೆಲೆಗೊಂಡಿದ್ದಿತು.

" ಸಾಕು ಸಾಕು ಲಲಿತಮ್ಮಾ, ನನ್ನಿಂದಾಗದು. ನಿಮ್ಮ ಮುಖದಿಂದ ಹೊರಡಿಸಿ ಮತ್ತೆ ನಿಮ್ಮನ್ನು ದುಃಖಕ್ಕೀಡುಮಾಡಲಾರೆ. "

" ದುಃಖ? " ವಿಚಿತ್ರ ನಗೆಯೊಂದನ್ನು ನಕ್ಕರು ಲಲಿತಮ್ಮ. " ನನಗೆಲ್ಲಿಯ ದುಃಖ ಸಾವಿತ್ರಮ್ಮಾ, ಈಗ ನನ್ನ ಹೃದಯ ಎಂಥ ದುಃಖವನ್ನೂ ಎದುರಿಸಬಲ್ಲುದು. "

ಲಲಿತಮ್ಮನವರ ಕರುಣಾಜನಕ ಕತೆ ಕೇಳುವದು ಬೇಡ, ಸಾಕು ಎಂದು ಸಾವಿತ್ರಮ್ಮನವರ ಬುದ್ಧಿ ಹೇಳುತ್ತಿದ್ದಿತಾದರೂ, ಹೃದಯ ಕೇಳಬೇಕೆಂದು ತವಕಪಡುತ್ತಲಿತ್ತು. ಲಲಿತಮ್ಮ ಹೇಳಲಾರಂಭಿಸಿದರು.

" ರಾಜು ನನ್ನನ್ನಗಲಿ ಹೋದನಂತರ ನನಗೆ ಅತಿಶಯವಾದ ಜ್ವರ ಬಂದು, ಬಂದ ಜ್ವರ ನಾಲ್ವತ್ತು ದಿನ ತೆಗೆಯಲಿಲ್ಲ. ತಂದೆಯಂತೂ ನನ್ನ ಸ್ಥಿತಿಯನ್ನು ಕಂಡು ಸಂಪೂರ್ಣ ನಿರಾಶೆಗೊಂಡಿದ್ದರು. " ನಾನು ದುಡು

ಕಿದೆ ಲಲಿತಾ, ಮೂರ್ಖ ಜನತೆಯ ಮಾತಿಗೆ ನಾನು ಕಿವಿಗೊಡಬಾರದಿತ್ತು ನನ್ನನ್ನು ಕ್ಷಮಿಸಲಾರೆಯಾ? ” ಎಂದು ಅವರು ಕೇಳಿದಾಗಿನ ದೈನ್ಯಮೂರ್ತಿ ಇನ್ನೂ ಕಣ್ಣಮುಂದೆ ನಿಲ್ಲುವುದು. ನನ್ನ ರಾಜುವನ್ನು ನನ್ನಿಂದ ದೂರ ಕೊಂಡೊಯ್ದು ದೈವ ನನ್ನ ಪಾಲಿಗೆ ಕಠೋರವಾಗಿತ್ತು. ಆದರೆ ನನ್ನ ತಂದೆಯ ಮರಣವನ್ನು! ನೋಡಲಿಕ್ಕೆ ನನ್ನನ್ನು ಗುರಿಮಾಡಿ ನನ್ನ ಸಂಪೂರ್ಣ ಪ್ರತಿಸ್ಪರ್ಧಿಯಾಗಿ ನಿಂತಿತು! ಅದರ ಮುಂದೆ ನಾನು ಕೈಯೂರಿದೆ. ”

“ ಅವರ ದಾರಿಯನ್ನೇ ನಾನೂ ಹಿಂಬಾಲಿಸಲೇ ಎಂದೊಮ್ಮೆ ವಿಚಾರ ಸುಳಿದು ಹೋಯಿತು. ಆದರೆ ರಾಜುವಿನ ಕೊನೆಯ ಬಯಕೆ ನನ್ನನ್ನು ಬಡಿದೆಬ್ಬಿಸಿತು. ಇನ್ನು ನಮ್ಮ ತಂದೆಯವರಿಗೆ ಸರಿಕಂಡ ದಾರಿಯಲ್ಲಿ ನನ್ನೀ ನಿರಾಶಾಮಯ ಜೀವನ ನೂಕಲಾ ? ಆದರೆ ಅವರ ದಾರಿಯಾವುದೋ ಅದೇ ತಿಳಿಯಲಿಲ್ಲ, ಇನ್ನೂ ತಿಳಿದಿಲ್ಲ. ವಿಚಾರ ಮಾಡದೆ ದುಡುಕುವವರ ದಾರಿ ಎಂಥದಿದ್ದರೇನು ? ”

“ ಅದೆಷ್ಟೋ ದಿನಗಳ ವರೆಗೆ ಯೋಚಿಸಿ, ಕೊನೆಗೆ ಒಂದು ನಿರ್ಧಾರಕ್ಕೆ ಬಂದೆ. ನನ್ನ ಜೀವನವನ್ನು ವ್ಯರ್ಥವಾಗಿ ಕಳೆಯದೆ ಯಾವುದೇ ಪರೋಪಕಾರದ ಕಾರ್ಯಕ್ಕಾಗಿ ಸವೆಯಿಸಬೇಕು ಎಂದು. ಮನದ ಇಚ್ಛೆಯಂತೆ ನಡೆಯಲು ಎಲ್ಲ ಬಗೆಯಿಂದಲೂ ಸಾಧ್ಯವಿದ್ದೇ ಇದ್ದಿತು. .... ಮನಃಶಾಂತಿಗಾಗಿ ಕೆಲದಿನ ಅಲ್ಲಿ ಇಲ್ಲಿ ಅಲೆದೆ. ಆದರೆ ನೆಮ್ಮದಿ ದೊರೆಯಲಿಲ್ಲ. ಕೊನೆಗೆ ಈ ಊರಿಗೆ ಬಂದೆ. ನನ್ನ ವಿಚಾರ ಚಿಗುರಿ ಕುದುರಲವಕಾಶ ಒದಗಿಸಿಕೊಟ್ಟರು, ಇಲ್ಲಿಯ ಕೆಲ ಮಹನೀಯರು. ಶಾಲೆ ಸ್ಥಾಪನೆಯಾಯಿತು. ಅಂದಿನಿಂದ ಶಾಲೆಯೇ ನನ್ನ ಸರ್ವಸ್ವ ಎಂದು ದುಡಿಯುತ್ತಲಿದ್ದೇನೆ. ಶಾಲೆಯ ಕಾರ್ಯ ಮಾಡುತ್ತಿರುವಾಗ ಮನಕ್ಕೆ ಅದಾವುದೋ ಒಂದು ಬಗೆಯ ಸಮಾಧಾನವಿರುವುದು. ”

“ ಹಿಂದಿನದೆಲ್ಲವನ್ನು ಮರೆತು ಬಿಡಲು ಅದೆಷ್ಟೋ ಯತ್ನಿಸಿದೆ. ಆದರೆ ಸಾವಿತ್ರಮ್ಮ, ಮನಸ್ಸು ಅಷ್ಟು ಕಠೋರವಾಗಲೊಲ್ಲದು. ....... ನನಗೀಗ ಯಾವ ಆಶೆಯೂ ಇಲ್ಲ. ಶಾಲೆ ಸ್ಥಾಪಿಸಿದೆ. ಅದೂ ಕೂಡ ಈಗ ಒಳ್ಳೆಯ ಸ್ಥಿತಿಯಲ್ಲಿದೆ. ಕೈಕೊಂಡ ಕಾರ್ಯವನ್ನು ತುಸುಮಟ್ಟಿಗಾದರೂ ಸಾಧಿಸಿದೆನೆಂದು ಮನಕ್ಕೆ ಒಂದು ಬಗೆಯ ನೆಮ್ಮದಿ.

ಅದೆಷ್ಟೋ ಜನರು ಬಾಯಿಗೆ ಬಂದುದನ್ನು ಕಿರುಚಿದರು. “ ಇವಳು ಮದುವೆಯಾಗದೆ ಹಾಗೆಯೇ ಇರುವಳೇ? ” ಎಂದು ಆಶ್ಚರ್ಯಚಕಿತರಾದರು. “ ಅಷ್ಟು ಆತ್ಮಸಂಯಮನ ಇವಳಲ್ಲಿದೆಯೇ! ” ಎಂದು ಹೊಟ್ಟೆ ಕಚ್ಚಿಕೊಂಡರು! ಕಚ್ಚಿದ ನಂಜು ಏರಲಿಲ್ಲ ಆ ಮಹಾತ್ಮರಿಗೆ!! ಆ ಮಾತುಗಳನ್ನು ಕೇಳಿದಾಗ ಕರುಳು ಕೊಯ್ದಂತಾಗುತ್ತಿತ್ತು. ಆದರೂ ಎಲ್ಲವನ್ನೂ ಸಹಿಸಿದೆ. ಈ ಜನಗಳ ಬಾಯಿ ಹಿಡಿಯುವುದು ಹುಟ್ಟಿಸಿದ ಬ್ರಹ್ಮನಿಗೂ ಅಸಾಧ್ಯವೇನೋ! ಕೊನೆಗೆ “ ನಾಯಿಗಳ ಹಿರಿಮೆಯೇ ಅಷ್ಟು ” ಎಂದು ಸಮಾಧಾನ ತಂದುಕೊಳ್ಳಲೆತ್ನಿಸಿದೆ. ಇತ್ತೀಚೆ ನನ್ನ ಗೊಡವೆಗೆ ಯಾರೂ ಬರಲಿಲ್ಲ. ಅಷ್ಟೇ ಸಾಕು ಎಂದುಕೊಂಡು ಸುಮ್ಮನಾದೆ. ”

ಸಾವಿತ್ರಮ್ಮ ಯಾವ ಮಾತನ್ನೂ ಆಡುವಂಥ ಸ್ಥಿತಿಯಲ್ಲಿರಲಿಲ್ಲ. ಲಲಿತಮ್ಮ ಆಳವಾದ ಉಸಿರೊಂದನ್ನು ಬಿಟ್ಟು ಮತ್ತೆ ಹೇಳಲಾರಂಭಿಸಿದರು.

“ ಮೊನ್ನೆ ಸಭೆಯಲ್ಲಿ ಮಾತನಾಡುವಾಗ ಕಣ್ಣ ಮುಂದೆ ಅದಾವುದೋ ಭಯಂಕರ ಚಿತ್ರ ಬಂದು ನಿಂತಂತಾಯಿತು. ನನ್ನ ಭಗಿನಿಯರೆಲ್ಲರೂ ಈ ಸಮಾಜದ ಮಡೆಯಲ್ಲಿ ಸಿಲುಕಿಬೀಳುವವರೆ? ಒಂದು ವೇಳೆ ನನ್ನಂತೆ ಅಥವಾ ನನ್ನಕಿಂತಲೂ ಭಯಂಕರ ಸ್ಥಿತಿ ಅವರಿಗೆ ಬಂದರೆ? ಎಂಬ ವಿಚಾರ, ಬೇಡ ಎಂದು ಎಷ್ಟು ಹತ್ತಿಕ್ಕಿದರೂ ತಲೆಯಲ್ಲಿ ಬರುತ್ತಲಿತ್ತು. ಆ ಸಮಸ್ಯೆಗೆ ಉತ್ತರ ದೊರೆಯಲಿಲ್ಲ. ಆ ಸಮಸ್ಯೆಯೇ ಭಯಾನಕ ಆಕಾರ ಧರಿಸಿ ಮುಂದೆ ಬಂದು ನಿಂತಂತಾಗಿ ಬಹಳೇ ಹೆದರಿಕೆ ಆವರಿಸಿತು. ಗಡಗಡನೇ ನಡುಗಿದೆ; ಮೈ ಬೆವರಿತು; ಮಾತು ಹೊರಡಲಿಲ್ಲ; ಕಣ್ಣಿಗೆ ಎಲ್ಲೆಲ್ಲಿಯೂ ಕತ್ತಲೆಯಾಯಿತು! ನಾನೆಲ್ಲಿರುವೆನೆಂಬುವೇ ತಿಳಿಯ ದಂತಾಯಿತು. ........ ಬೀಳಲಿದ್ದೆ. ಯಾರೋ ಹಿಡಿದುಕೊಂಡರು. ” ಮಾತನಾಡುವಾಗ ಅವರ ಧ್ವನಿಯಲ್ಲಿ ನಡುಕವಿದ್ದಿತು. ಮತ್ತೆ ಆ ದಿನದಂತೆ ಆದೀತೆಂದು ಹೆದರಿದ್ದರೋ ಏನೋ!

ಐದು ನಿಮಿಷ ಯಾರೂ ಏನನ್ನೂ ಮಾತನಾಡಲಿಲ್ಲ!

ಕೊನೆಗೆ ಸಾವಿತ್ರಮ್ಮನವರು ನಿಟ್ಟುಸಿರಿನೊಂದಿಗೆ “ ನಿಮ್ಮ ತ್ಯಾಗ ದೊಡ್ಡದಮ್ಮಾ! ” ಎಂದರು!

ಲಲಿತಮ್ಮನವರ ಶೂನ್ಯದೃಷ್ಟಿ ಚಪ್ಪರದ ಬೆಳಕಿಂಡಿಯಲ್ಲಿ ನೆಟ್ಟಿದ್ದಿತು!!

# ನೂರು ಚಿತ್ರಗಳು !

ಈಗ ಕೆಲದಿನಗಳ ಹಿಂದೆ ಪುಣೆಯಿಂದ ಗೆಳೆಯ ಮಾಧು ಬಂದಿದ್ದ. ಅಂದು ರವಿವಾರ. ಮಧ್ಯಾಹ್ನ ಮ್ಯಾಟನೀ ತೀರಿಸಿಕೊಂಡು ಹಾಗೇ 'ಕ್ಯಾಫೆ-ಇ-ಲಾಯಿಟ' ದಲ್ಲಿ ಚಹ ಕುಡಿದು, ತುಸು ಅಡ್ಡಾಡಿ ಬರೋಣ ಎಂದುಕೊಂಡು ಲಕ್ಷ್ಮೀ ದಿಬ್ಬದ ಕಡೆಗೆ ನಡೆದೆವು. ಆಗ ಇನ್ನೂ ಮಳೆಗಾಲ ಸಂಪೂರ್ಣ ಮುಗಿದಿರಲಿಲ್ಲ. ಆಗಾಗ ತುಸು ತುಸು ಸೂಸು ಮಳೆ ಉದುರುತ್ತಿತ್ತು. ನಾವು ಹೊರಟಾಗ ಮಳೆ ಬೀಳುತ್ತಿರಲಿಲ್ಲವಾದರೂ, ತಿರುಗಿ ಬರುವಾಗ ಸಿಟಿ ಸಿಟಿ ಮಳೆಗೆ ಆರಂಭವಾಯಿತು. ಸುಮಾರು ಹದಿನೈದು ನಿಮಿಷ ಗಿಡವೊಂದರ ಬುಡದಲ್ಲಿ ನಿಂತೆವು. ಆದರೆ ಹಾಗೆ ನಿಂತು ದಾರೀ ಕಾಯುತ್ತಿರುವಾಗ ಬೆಳಗಾವಿಯಲ್ಲಿಯ ಮಳೆ ಎಂದಾದರೂ ತಡೆದೀತೇ ? ಕಡೆಗೆ ಬೇಸತ್ತು ಮಾಧು, " ಇದು ಕೊಳ್ಳಲಿ ನಡಿಯಪ್ಪಾ, ಇಂಥ ಮಳೆಯಲ್ಲಿ ತೋಯಿಸಿಕೊಳ್ಳುವದೂ ಅಷ್ಟರಲ್ಲಿಯೇ ಇದೆ. ತುಸು ಚಳಿ ಅನ್ನಿಸಬಹುದು. ಆದರೆ ಬಿಸಿ ಮಾಡಲಿಕ್ಕೆ ಆ ಮಾಣಿ ಇದ್ದಾನಲ್ಲಾ!" ಎಂದು ನನ್ನನ್ನು ಹೊರಡಿಸಿಯೇ ಬಿಟ್ಟ.

ಸುಮಾರು ಹತ್ತು-ಹದಿನೈದು ಹೆಜ್ಜೆ ನಡೆದು ಬಂದಿರಬಹುದು. ಮುಸುಕು ಮುಸುಕು ಕತ್ತಲೆ ಪಸರಿಸುತ್ತಿತ್ತು. ಆದರೂ ಒಬ್ಬರು ಇನ್ನೊಬ್ಬರಿಗೆ ಸ್ಪಷ್ಟವಾಗಿ ಕಾಣುವಂತಿದ್ದಿತು. ಆ ದಾರಿಯಲ್ಲಿ ಜನ ತುಸು ಕಡಿಮೆ. ನಾವಿಬ್ಬರೇ ಏನೋ ಹರಟೆ ಕೊಚ್ಚುತ್ತ, ಚಳಿಗೆ ಹಲ್ಲುಗಳನ್ನು ತುಸು ನಡುಗಿಸುತ್ತ ಬರುತ್ತಿದ್ದೆವು. ನಮ್ಮ ಹಿಂದು ಮುಂದು ಯಾರೂ ಇದ್ದಂತಿರಲಿಲ್ಲ. ಆದರೆ ಅಷ್ಟರಲ್ಲಿ ನಮ್ಮಿಂದ ತುಸು ದೂರದಲ್ಲಿ ನಮ್ಮ ಕಡೆಗೆ ಬರುತ್ತಿದ್ದ ಒಂದು ವ್ಯಕ್ತಿ ಅಸ್ಪಷ್ಟವಾಗಿ ಕಂಡಿತು.

" ಅದಾವನೋ ಪುಣ್ಯವಂತ! ನಾವೆಲ್ಲ ತಿರುಗಿ ಮನೆಗೆ ಹೊರಟಾಗ, ಈತ ಈಗ ತಿರುಗಾಡಲಿಕ್ಕೆ ಹೊರಟಿದ್ದಾನಲ್ಲ!" ನಾನು ಸಹಜವಾಗಿ ಅಂದುಬಿಟ್ಟೆ.

" ಎಚ್. ಎಮ್. ಯಾವನಾದರೂ ಇರಬೇಕು." ಮಾಧು ತನ್ನ 'ರಿಮಾರ್ಕು' ಪಾಸು ಮಾಡಿದ.

ಅಷ್ಟರಲ್ಲಿ ಆ ವ್ಯಕ್ತಿ ನಮ್ಮ ಸಮೀಪಕ್ಕೆ ಬಂದಿತು. ಅವನನ್ನು ನೋಡಿದ ಯಾರೂ, — ಆತ ವಿರಾಮದಿಂದ ಅಡ್ಡಾಡಲಿಕ್ಕೆ ಹೊರಟಿಲ್ಲವೆಂದು ಹೇಳುವಂತಿದ್ದಿತು. ವಯಸ್ಸು ಮೂವತ್ತಕ್ಕೆ ಮೀಕ್ಕಿರಬಹುದು. ಕಿರಿಯ ಆಳು. ತಲೆಗೆ ಟೊಪ್ಪಿಗೆ ಇರಲಿಲ್ಲ. ಕನಿಷ್ಠ ಒಂದೂವರೆ ಗೇಣುದ್ದ ತಲೆಗೂದಲು ಬಾಚದೆ, ಎಣ್ಣೆ ಕಾಣದೆ ಹದಿನೈದು ದಿನಗಳಾದರೂ ಆಗಿದ್ದಿರಬಹುದು. ಮೈಯಲ್ಲಿ ಕೇವಲ ಒಂದು ಶರ್ಟ್. ಅದೂ ಕೂಡ ಎದೆಯ ಮೇಲೆ ಸಾಕಷ್ಟು ಹರಿದಿತ್ತು. ಬಟನ್ನುಗಳೂ ಇದ್ದಂತಿರಲಿಲ್ಲ. ಹಾಕಿಕೊಂಡುದೊಂದು ಖಾಕಿ ಗಿಡ್ಡ ಚಣ್ಣ. ಕಾಲುಗಳು ಬರಿದಾಗಿದ್ದುವು!

ಆತ ನಮ್ಮ ತೀರ ಸಮೀಪಕ್ಕೆ ಬಂದ. ಬಾಡಿದ ಮುಖ, ಒಳಗೆ ಸಿಕ್ಕಿಕೊಂಡ ಕಣ್ಣು, ಪಚ್ಚುಬಿದ್ದ ಗಲ್ಲ, ಚಳಿಯಿಂದ ನಡುಗಿ ಕಟಕಟ ಸಪ್ಪಳ ಮಾಡುತ್ತಿದ್ದ ದಂತಪಂಕ್ತಿ, ಚಳಿಯನ್ನು ಕಡಿಮೆ ಮಾಡಲು ಎರಡೂ ಕೈಗಳನ್ನು ಕಟ್ಟಿಕೊಂಡು ಎದೆಗವಚಿಕೊಂಡು, ಕರುಣಾಜನಕ ಮುದ್ರೆಯಿಂದ ಕುಂಟುತ್ತ, — ಕಾಲಿಗೆ ಏನೋ ಗಾಯವಾಗಿರಬಹುದು. — ಬರುವ ದೃಶ್ಯ ಯಾವ ಹೃದಯವನ್ನೂ ಹೊಕ್ಕು ಅರೆ ನಿಮಿಷ 'ಹಾಯ್' ಎನ್ನಿಸದಿರುತ್ತಿರಲಿಲ್ಲ. ಅವನನ್ನು ಕಂಡು ನಮ್ಮ 'ಕ್ರಿಟಿಸಿಜಂ' ತಾನೇ ತಾನಾಗಿ ಅಡಗಿಹೋಯಿತಲ್ಲದೆ, ಏನೋ ಒಂದು ತೆರನಾದ ಕರುಣೆ ಮೊಳಕೆಯೊಡೆಯಲಿತ್ತು!

ನೇರವಾಗಿ ಆತ ನಮ್ಮೆದುರಿಗೇ ಬಂದು ನಿಂತು. "ತಾವು ಇದೇ ಊರವರೇ ರಾಯರೇ?" ಎಂದ. ಮುಖದಿಂದ ಏನೋ ಕೆಟ್ಟ-ಕೊಳೆತ ವಾಸನೆ ಬಂದಿತು.

ನಾನು ಮಾಧುವಿನ ಮುಖ ನೋಡಿದೆ; ಆತ ಕೂಡ ನನ್ನನ್ನೇ ನೋಡುತ್ತಲಿದ್ದ.

"ರಾಯರೇ, ತಾವು ಇಲ್ಲಿಯವರೆ?" ಆತ ಇನ್ನೊಮ್ಮೆ ಕೇಳಿದ.

"ಹೌದು" ನಾನು ಉತ್ತರಿಸಿದೆ.

"ರಾಯರೆ, ನಾನು ಕುಲಬುರ್ಗಾದ ಹತ್ತಿರದ ಒಂದು ಹಳ್ಳಿಯವ. ಮೊನ್ನಿನ ದಂಗೆಯಲ್ಲಿ ಅವ್ವ ಎಲ್ಲಿಯೋ ಬಿದ್ದು ಸತ್ತು ಹೋದಳು. ಹೆಂಡತಿಯ ಸುಳಿವೇ ಸಿಗಲಿಲ್ಲ. ನಾನು ಹೀಗೇ ಅಲೀತಾ ಹೇಗೋ ಇನ್ನೂ

ಜೀವದಿಂದಿದ್ದೇನೆ. ಓದಲಿಕ್ಕೆ-ಬರೀಲಿಕ್ಕೆ ಸ್ವಲ್ಪ ಬರ್ತದೆ. ಕಡೆಗೆ ಕೂಲಿ ನಾಲಿ ಮಾಡಬೇಕು ಎಂದು ಎಲ್ಲಿ ಕೇಳಿದರೂ ಎಲ್ಲರೂ "ಇಲ್ಲ ಹೋಗು" ಅಂತಾರೆ. ಇನ್ನು ಭಿಕ್ಷೆಯಂತೂ ದೂರವೇ ಉಳಿಯಿತು. ಈ ಹೊತ್ತು-ಮುಣಗೋ ಕಾಲಕ್ಕೆ, ದೇವರಾಣೆಗೂ ಹೇಳ್ತೆನೆ ರಾಯರೇ, ಮೂರು ದಿನ ದಿಂದ ಹೊಟ್ಟೆ ಅನ್ನ ಕಂಡಿಲ್ಲ. ಈ ದಿನ ಒಂದು ಕಪ್ಪು ಚಹಾ ಸುದ್ಧಾ ಇಲ್ಲ. ಏನಾದರೂ ಕೆಲಸ-ಗಿಲಸ ಇದ್ದರೆ ಹೇಳ್ರಿ. ದುಡೀತೇನಿ ........ "

ಹೀಗೇಯೇ, ಅದೇಕೆ ಇದಕ್ಕಿಂತಲೂ ಹೆಚ್ಚಾಗಿ, ಇನ್ನೂ ಏನೇನೋ ಹೇಳಿ ಆಣೆ ಎರಡಾಣೆ ಕಿತ್ತುಕೊಳ್ಳುವ ಜನಕ್ಕೆ ಬೆಳಗಾವಿಯಲ್ಲೇನೂ ಕೊರ ತೆಯಿಲ್ಲ. ಈತನೂ ಅಂಥವರಲ್ಲಿ ಒಬ್ಬ ಎಂದು ಸಹಜವಾಗಿ ಯಾರಾ ದರೂ ಎರಡನೇಯವರು ತಿಳಿಯುಬಹುದಿತ್ತು. ಆದರೆ ಬಾಡಿ-ಕಂದಿ-ಕುಂದಿ ಕಳೆಗೆಟ್ಟ ಮುಖ ಮತ್ತು ಸತ್ವವಿಲ್ಲದ ಧ್ವನಿಗಳನ್ನು ಕಂಡಾಗ, ಆತ ಹೇಳಿದು ದರಲ್ಲಿ ಕೆಲವಂಶವಾದರೂ ನಿಜವಿರಬೇಕೆಂದು ಅದೇಕೋ ನನಗೆ ಅನ್ನಿಸಿತು.

"ಓದು ಬರೆಹ ಎಷ್ಟು ಆಗಿದೆಯಪ್ಪ?" ಅವನ ವಿದ್ಯಾಭ್ಯಾಸ ವಿಚಾ ರಿಸಿ ಅವನನ್ನು ಕೆಲಸಕ್ಕೆ ಇಟ್ಟುಕೊಳ್ಳುವವರಂತೆಯೇ ಇದ್ದಿತು, ಮಾಧು ವಿನ ಪ್ರಶ್ನೆ .

"ಎಲ್ಲೋ ಕನ್ನಡ ಐದಾರು ಯತ್ತೆ ಆಗೇದ ರಾಯರೇ."

ಬಿ. ಎ. ಪಾಸಾದವರೇ ಕೆಲಸವಿಲ್ಲದೇ ಒಂದು ಕಪ್ಪು ಚಹಕ್ಕೆ ತುಟ್ಟ ಯಾಗಿ ಕುಳಿತಿರುವಾಗ, ಈ ಐದಾರು ಇಯತ್ತೆ ಕಲಿತವನಿಗೆ ಏನು ತಾನೇ ಕೆಲಸ ದೊರೆಯುಬೇಕು?

"ಅದನ್ನೆಲ್ಲಾ ಕೇಳಿ ಏನು, ಆತನನ್ನು ಕೆಲಸ ಕೊಡಿಸಲಿಕ್ಕೆ ಪುಣೆಗೆ ಕರೆದುಕೊಂಡು ಹೋಗುವವನಿದ್ದೀಯೇನೋ ?" ಈ ಮಾತನ್ನು ಆಡಬಾರ ದೆಂದು ಒಮ್ಮೆ ವಿಚಾರ ಬಂದರೂ, ಬಾಯಿ ಆಡಿಯೇ ತೀರಿತು.

"ಹೂಂ. ಅದೂ ನಿಜವೇ." ಮಾಧು ಒಪ್ಪಿ ಸುಮ್ಮನಾದ.

ಕೊನೆಗೆ ಜೇಬಿನಲ್ಲಿಯ ನಾಲ್ಕಾಣೆ ತೆಗೆದು ಆತನಿಗೆ ಕೊಟ್ಟು, "ಕೆಲಸ ಏನೂ ನಮ್ಮ ಹತ್ತರ ಇಲ್ಲ. ಇನ್ನಾರನ್ನಾದರೂ ಕೇಳು." ಎಂದು ಹೇಳಿದೆ.

"ಬಹಳ ಉಪಕಾರವಾಯಿತು ರಾಯರೇ." ಎಂದು ಆತ ಕೈ ಮುಗಿದ. ಕಣ್ಣು ಕೃತಜ್ಞತೆಯಿಂದ ತುಂಬಿಕೊಂಡಿದ್ದುವು! ಆತ ಮುಂದೆ ಸಾಗಿದ.

"ಇದೀಗ ಚಹಕ್ಕೆ ಚಿಲ್ಲರೆ ಇಲ್ಲ. ಎನ್ನುತ್ತಿದ್ದವ, ಈಗೆಲ್ಲಿಂದ ನಾಲ್ಕಾಣೆ ತಂದೆಯಪ್ಪಾ ?" ಎಂದು ಮಾಧು ನನ್ನನ್ನು ಕೇಳದೇ ಬಿಡಲಿಲ್ಲ.

ಆದರೆ ಆ ಪ್ರಶ್ನೆಗೆ ಅದರಂತೆ ಮಾಧುವಿನ ಅಂಥ ಇನ್ನೂ ಒಂದೆರಡು ಪ್ರಶ್ನೆಗಳಿಗೆ ನನ್ನಿಂದ ಉತ್ತರ ಕೊಡಲಾಗಲಿಲ್ಲ. ಆಗ ನನ್ನ ತಲೆಯಲ್ಲಿ ಒಂದೇ ವಿಚಾರ ಸುಳಿಯುತ್ತಿತ್ತು. "ಆತ ಕೆಲಸ ಮಾಡುತ್ತೇನೆ. ಹೊಟ್ಟೆಗೆ ಹಾಕಿರಿ" ಎಂದರೂ ಆವನಿಗೆ ಹೊಟ್ಟೆಗೆ ದೊರೆಯುತ್ತಿಲ್ಲ. ಇಂಥವರು ನಮ್ಮಲ್ಲಿ ಅದೆಷ್ಟು ಜನ ಇರಲಿಕ್ಕಿಲ್ಲ ?

* * * *

ಮುಂದೆ ಎರಡು ದಿನಗಳ ತರುವಾಯ ಸಾಯಂಕಾಲ ಮೇಲ ಗಾಡಿಯಿಂದ ಮಾಧು ಪುಣೆಗೆ ಹೊರಟಿದ್ದ. ಆತನನ್ನು ಬೀಳ್ಕೊಡಲೆಂದು ನಾನೂ ನಿಲ್ದಾಣಕ್ಕೆ ಹೋಗಿದ್ದೆ. ಅದೇಕೋ ನಿಲ್ದಾಣದಲ್ಲಿ ಬಹಳೇ ಗದ್ದಲವಿದ್ದಿತು. ಗಾಡಿ ಬಂದ ಮೇಲಂತೂ ಅದು ಇನ್ನೂ ಹೆಚ್ಚಾಯಿತು. ಮಾಧು ಗಡಿಬಿಡಿಯಿಂದ ಕಿಟಿಕಿಯೊಳಗಿಂದ ಒಳಕ್ಕೆ ಹಾರಿ ತುಸು ಸ್ಥಳ ಸಂಪಾದಿಸಿದ. ಆತನ ಬ್ಯಾಗನ್ನು ನಾನು ಕೊಡುತ್ತಿದ್ದೆ. ಅಷ್ಟರಲ್ಲಿ ನನ್ನಿಂದ ತುಸು ದೂರದಲ್ಲಿಯೇ ಏನೋ ಗಲಾಟೆ-ಒದರಾಟ-ಚೀರಾಟ ಕೇಳಬಂತು. ಮಾಧುವಿಗೆ ಆತನ ಸಾಮಾನನ್ನು ಕೊಟ್ಟು ಆ ಗಲಾಟೆ ಏನು ಎಂದು ನೋಡಲೆಂದು ಎರಡು ಹೆಜ್ಜೆ ಮುಂದೆ ಹೋದೆ. ಯಾವನೋ ಒಬ್ಬ 'ಠಕ್ಕ' ಒಬ್ಬ ಮುದುಕನ ಜೇಬಿನಿಂದ ಹಣದ ಚೀಲವನ್ನು ಎತ್ತಿ ಹಾಕಲಿದ್ದನಂತೆ ಅದನ್ನು ಇನ್ನೊಬ್ಬ ಕಂಡು ಆತನನ್ನು ಹಿಡಿದು ಎರಡು ಕೊಡತ ಕೊಟ್ಟ. ಜನ ಮುಕುರಿತು. ಕೂಡಿದವರೆಲ್ಲರೂ ಒಂದೊಂದು ಒದೆತ-ಒದೆತ ಕೊಡುತ್ತಿದ್ದರು. ಕೈಗಳಿಗಂತೂ ಕೊರತೆಯೇ ಇರಲಿಲ್ಲ. ಆ ಕಳ್ಳನ ಅಕ್ಕ-ತಂಗಿ ತಾಯಿ-ತಂದೆ-ಅಜ್ಜ ಎಲ್ಲರೂ ಉದ್ಧಾರವಾದರು! ಇದೆಲ್ಲವನ್ನೂ ನೋಡಿ "ಇಂಥ ಸ್ಥಿತಿ ಎಂದು ಹೋಗುವುದಪ್ಪಾ, ನಮ್ಮ ದೇಶದಿಂದ ?" ಎಂದುಕೊಂಡಿತು ಮನಸ್ಸು.

ಅಷ್ಟರಲ್ಲಿ ಯಾವನೋ ಒಬ್ಬ ಟೊಣಪ ಒಳ್ಳೇ ಆವೇಶದಿಂದ ಬಂದು, " ಬೋಡ್ಡೀ ಮಗನೇ, ತುಡುಗು ಮಾಡುತ್ತೀಯಾ ? ಕೆಲಸ ಮಾಡಲಿಕ್ಕೆ ಬೇಡ ಮಕ್ಕಳಿಗೆ. ಕಡಿದರೆ ನಾಲ್ಕು ಜನ ಆಗುತ್ತಾನೆ. ಸೂ.... ಮಗ. " ಎಂದವನೇ ಜೋರಿನಿಂದ ಆ ಕಳ್ಳನನ್ನು ಒದೆದ. ಆತ ಪೆಟ್ಟು ತಾಳಲಾರದೆ ' ಅಯ್ಯೋ ಽ ' ಎಂದು ಕಿರುಚಿದ.

ನನಗೆ ಒಮ್ಮೆಲೇ ಏನೋ ಸಂಶಯ ಬಂದಿತು. ಆ ಧ್ವನಿಯನ್ನು ಎಲ್ಲಿಯೋ ಕೇಳಿದಂತೆ ಭಾಸವಾಯಿತು. ಜನರನ್ನು ಬದಿಗೆ ಸರಿಸಿ ಮುಂದೆ ಹೋಗಿ ನೋಡಿದೆ. ಅದೇ ವ್ಯಕ್ತಿ ! ಮೊನ್ನೆ ಮಾಧು ಮತ್ತು ನಾನು ಕಂಡು ನಾಲ್ಕಾಣೆ ಕೊಟ್ಟ ಪ್ರಾಣಿ ! ಆಶ್ಚರ್ಯವಾಯಿತು ನನಗೆ. ಹೊಡೆತದಿಂದ ಹಲ್ಲಿಗೆ ಬಹಳೇ ಪೆಟ್ಟು ತಗಲಿದ್ದಿತ್ತೇನೋ, ಮುಖ ದಿಂದ ಕೆನ್ನೀರು ಸೋರುತ್ತಿತ್ತು. ಆದರೂ ಜನರ 'ಆವೇಶ'ಕ್ಕೇನೂ ಕೊರತೆಯಾಗಿರಲಿಲ್ಲ! ನನ್ನ ಕಣ್ಣುಗಳಿಂದ ಆ ದೃಶ್ಯ ನೋಡಲಾಗಲಿಲ್ಲ. ಹಾಗೇ ಹಿಂತಿರುಗಿದೆ.

" ಏನೋ ಅದು ಗದ್ದಲ ?" ಮಾಧು ಕೇಳಿದ. ಎಲ್ಲ ವೃತ್ತಾಂತ ಹೇಳಿದೆ. ಅದನ್ನು ಕೇಳಿ ಮಾಧು, " ನನಗೆ ಗೊತ್ತೋ ಇವರೆಲ್ಲರ ಆಟ. ಪುಣೆಯಲ್ಲಿ ಇಂಥ 'ಘಟಂಗ'ರಿಗೆ ಲೆಕ್ಕವೇ ಇಲ್ಲ. ನಿನ್ನೆ ದೊಡ್ಡ ದಯೆ ತೋರಿಸಿ ಆ ಕಳ್ಳ ಮಂಗ–ಮಗನಿಗೆ ನಾಲ್ಕಾಣೆ ಕೊಟ್ಟೆ ನೀ...." ಎಂದೆನ್ನುತ್ತಿರುವಾಗಲೇ ಗಾಡಿ ಸಿಳ್ಳು ಹಾಕಿತು.

ಆ ಮಾತು ಅಷ್ಟಕ್ಕೆ ನಿಲ್ಲಿಸಿ, ಕೈ ಕೈ ಕುಲುಕಿಸಿ ನಮ್ಮ ಸ್ನೇಹ ಪ್ರದರ್ಶನ ಮಾಡಿದೆವು. ಗಾಡಿ ಹೊರಟಿತು. ಆತ "ಗುಡ್ ಬಾಯ್" ಎಂದ. ನನಗೆ ಏನು ಹೇಳಲಿಕ್ಕೂ ಮಾತು ಬರಲಿಲ್ಲ. ಹಾಗೇ ಕರವಸ್ತ್ರ ವನ್ನು ಗಾಳಿಯಲ್ಲಿ ಅಲುಗಾಡಿಸುತ್ತಿದ್ದೆ. ಗಾಡಿ ಕಣ್ಮರೆಯಾಗುವ ವರೆಗೂ ಅಲ್ಲಿಯೇ ನಿಂತಿದ್ದೆ. ತಿರುಗಿ ಬರುವಾಗ, ಒಬ್ಬ ಪೋಲೀಸ ಆ 'ಕಳ್ಳ' ನನ್ನೂ ಆ ಮುದುಕನನ್ನೂ ಇನ್ನೂ ಕೆಲವು ಜನರನ್ನೂ ಕರೆದುಕೊಂಡು ಹೊರಟಿದ್ದ, ಪೋಲೀಸ ಕಚೇರಿಗೆ ಇದ್ದಿರಬಹುದು.

ಮನೆಗೆ ಬರುವಾಗ ನಾನೇ ನಾನಾಗಿ ವಿಚಾರಿಸುತ್ತಿದೆ. " ಮಾಧು ಹೇಳಿದಂತೆ ನಿಜವಾಗಿಯೂ ಆತ ಠಕ್ಕನೇ ? ಆತನ ಕಳ್ಳತನಕ್ಕೆ ಮೂಲ-

ಭೂತ ಕಾರಣವೇನು ? ” ಹೀಗೆ ವಿಚಾರಿಸುತ್ತಿದ್ದಂತೆಯೇ, “ ಏನಾದರೂ ಕೆಲಸ ಇದ್ದರೆ ಹೇಳಿರಿ. ದುಡೀತೇನಿ. ” ಎನ್ನುತ್ತಿದ್ದ ಆತನ ಕರುಣಾಜನಕ ಮುಖ ಕಣ್ಮುಂದೆ ಬಂದು ನಿಂತಿತು ........ ಕೂಡಲೇ “ ಬೋಡ್ಡೀಮಗನೇ ತುಡುಗು ಮಾಡ್ತಿಯಾ ? ಕೆಲಸ ಮಾಡಲಿಕ್ಕೆ ಬೇಡ ಮಕ್ಕಳಿಗೆ ” ಎಂದು ಆತನನ್ನು ಒದೆದ ಆ ‘ದೊಡ್ಡ’ ಮನುಷ್ಯನ ಚಿತ್ರವೂ ಕಣ್ಮುಂದೆ ಸುಳಿದು ಹೋಯಿತು.

ಆದರೆ ನನ್ನ ಸಮಸ್ಯೆಗೆ ಉತ್ತರ ಮಾತ್ರ ದೊರೆಯಲಿಲ್ಲ.

❦ ❦ ❦

ನಿನ್ನೆ ಮಧ್ಯಾಹ್ನ ಮಾಧುವಿನಿಂದ ಪತ್ರವೊಂದು ಬಂದಿತು. ಆತನ ತಂದೆ ವಿಷಮಜ್ವರದಿಂದ ತೀರಿಕೊಂಡರೆಂದು. ಆತನ ತಂದೆಯಲ್ಲಿ ನನಗೆ ಮೊದಲಿನಿಂದಲೂ ತುಸು ಆದರ ಹೆಚ್ಚು. ಪತ್ರ ಓದಿ ಮನಸ್ಸಿಗೆ ಬಹಳೇ ಕೆಡಕೆನಿಸಿತು. ಕೋಣೆಯಲ್ಲಿ ಕುಳಿತರೆ ಪುನಃ ಪುನಃ ಅವರ ಚಿತ್ರವೇ ಕಣ್ಣು ಮುಂದೆ ಬಂದು, ಬಹಳೇ ‘ ಹುರುಹುರು ’ ಆಗತೊಡಗಿತು. ಕಡೆಗೆ ಕೋಣೆಗೆ ಕೀಲಿ ಹಾಕಿ, ಹಾಗೇ ಬಿಸಿಲಲ್ಲಿಯೇ ಬೀದಿ ಹಿಡಿದು ಹೊರಟೆ.

ಬೆಳಗಾವಿಯಲ್ಲಿ ‘ ಹನ್ನೆರಡು ಗಡಗಡೆಯ ಬಾವಿ ’ ಬಹು ಕಾಲ ದಿಂದಲೂ ಪ್ರಸಿದ್ಧ. ಅದರ ಸಮೀಪದ ದಾರಿಯಿಂದ ಹಾಗೇ ಹೊರಟಿದ್ದೆ. ಅದೇಕೋ ಬಾವಿಯ ಹತ್ತಿರ ಜನ ದಟ್ಟಾಗಿ ನೆರೆದಿತ್ತು. ಅಷ್ಟರಲ್ಲಿ ಯಾರೋ ಮಾತನಾಡಿದ್ದು ಕೇಳಿಸಿತು. “ ಯಾವಾತನೋ ಬಾವಿಯಲ್ಲಿ ಬಿದ್ದು ಸತ್ತಿದ್ದಾನೆ. ” ಎಂದು. ಮರಣವಾರ್ತೆಯನ್ನು ಕೇಳಿ ಆದ ಹಳಹಳಿಯನ್ನು ಹೇಗಾದರೂ ಮಾಡಿ ಮರೆಯಿಸಬೇಕೆಂದು ಹೊರಗೆ ಹೊರಟರೆ, ಪ್ರತ್ಯಕ್ಷ ಮರಣವನ್ನೇ ನೊಡುವ ಪ್ರಸಂಗ ಬರಬೇಕೇ ?

“ಏನು ಮಾಡುವದು? ಎಷ್ಟೋ ಜನ ಸಾಯುತ್ತದೆ. ಎಂದುಕೊಂಡು ಎರಡು ಹೆಜ್ಜೆ ಹಾಗೇ ಮುನ್ನಡೆದೆ. ಆದರೆ ಕಾಲುಗಳು ತಾವೇ ತಾವಾಗಿ ತಡೆದುವು. ‘ ನೋಡಿಯೇ ಹೋಗೋಣ ’ ಎಂದಿತು ಮನಸ್ಸು. ಹಾಗೇ ಹಿಂತಿರುಗಿ ಬಾವಿಯ ಸಮೀಪಕ್ಕೆ ಹೋದೆ. ಬಾವಿ ಸಾಕಷ್ಟು ಅಗಲವಾಗಿದೆ. ಜನ ಸುತ್ತಲೂ ನಿಂತು ನೋಡುತ್ತಿತ್ತು. ಕೆಲವರು ಕೆಳಗಿಳಿದು ಹಗ್ಗ ಕಟ್ಟಿ ಮೃತದೇಹವನ್ನು ಮೇಲಕ್ಕೆ ತೆಗೆಯುತ್ತಿದ್ದರು. ಸಂಪೂರ್ಣ

ಮೇಲೆ ತೆಗೆದರು. ಆ ದೇಹವನ್ನು ನೋಡಿದೆ, ನನ್ನ ಕಣ್ಣುಗಳನ್ನು ನಾನೇ ನಂಬಲಾರದಾದೆ. ಕಾಲು ಥರಥರ ನಡುಗಿದುವು! ಹೃದಯ ಜೋರಾಗಿ ಬಡಿದುಕೊಳ್ಳತೊಡಗಿತು. ಆ ಶರೀರವನ್ನು ಇನ್ನೊಮ್ಮೆ ನೋಡಿದೆ. ಅದೇ; ಅದೇ ವ್ಯಕ್ತಿ! ಹೈದರಾಬಾದ ದಂಗೆಯಲ್ಲಿ ಹೆತ್ತ ತಾಯಿಯನ್ನು ಕಳೆದುಕೊಂಡು, ಹೆಂಡತಿಯನ್ನು ರಜಕಾರರ ದವಡೆಯಲ್ಲಿ ಸಿಲುಕಿಸಿ, ತನ್ನ ಜೀವವನ್ನು ಉಳಿಸಿಕೊಳ್ಳಲು ಊರೂರು ಅಲೆದು, ಕೆಲಸಕ್ಕೆ ಹಂಬಲಿಸಿ, ಕೆಲಸ ದೊರೆಯದೆ, ಬಿಕ್ಷೆ ಬೇಡಿ, ಅದೂ ದೊರೆಯದೆ, ಕಳವು ಮಾಡಿ, ಹೊಡೆತ-ಬಡೆತ-ಅವಮಾನಗಳನ್ನು ಸಹಿಸಿ, ಕಡೆಗೆ ಏನೂ ಗತಿಯಿಲ್ಲದಿರುವಾಗ ಜಲದೇವತೆಯನ್ನು ಮೊರೆಹೊಕ್ಕ ವ್ಯಕ್ತಿ ಅದೇ!

ಅಲ್ಲಿ ನಿಲ್ಲಲಾಗಲಿಲ್ಲ; ಒಮ್ಮೆಲೇ ಕಾಲೂ ಕೇಳಲಿಲ್ಲ!

ಯಾವುದೋ ಹೆಂಗಸು “ ರಂಡೇ ಮಗ, ಬಾವಿಯಲ್ಲಿ ಬಿದ್ದು ಸತ್ತು ನಮಗೆ ನಾಲ್ಕು ದಿನ ನೀರು ಕುಡಿಯದಂತೆ ಮಾಡಿದ! ” ಎಂದು ಶಪಿಸುತ್ತಿದ್ದಳು!!

ಅದನ್ನು ಕೇಳಿದ ಕೂಡಲೇ, ಕಾಲು ಒಮ್ಮೆಲೇ ಕಿತ್ತಿದುವು! ನೇರವಾಗಿ ಕೋಣೆಗೆ ಧಾವಿಸಿದೆ !

# ಪ್ರೊಫೆಸರ ರಾವ್.



ಪ್ರೊಫೆಸರ ರಾವ್ ಅವರ ಮನೆಯ ಬಾಗಿಲ ಮುಂದೆ ನಿಂತು ಸುಮಾರು ಹದಿನಾಲ್ಕು ಹದಿನೈದು ವರ್ಷದ ಬಾಲಕನೊಬ್ಬನು “ ಕಾಲ ಬೆಲ್ ” ನ್ನು ಒದರಿಸುತ್ತಲಿದ್ದ. ಒಳಗಿನಿಂದ ಅವರ ಹೆಂಡತಿ ಮುಖ ಗಂಟಿಕ್ಕಿಕೊಂಡು ಬಂದು ಬಾಗಿಲನ್ನು ತೆರೆದು “ ಯಾರು ಬೇಕು? ಏನು ಕೆಲಸ? ಅವರೀಗ ಮಲಗಿಕೊಂಡಿದ್ದಾರೆ! ” ಎಲ್ಲವನ್ನೂ ಒಂದೇ ಉಸುರಿನಲ್ಲಿ ನುಡಿದರು.

" ಪ್ರೊ. ರಾವ್ ಅವರನ್ನು ಕಾಣಬೇಕಿತ್ತಮ್ಮಾ. ನಾನೊಬ್ಬ ಬಡ ವಿದ್ಯಾರ್ಥಿ ....... " ಆತ ಇನ್ನೂ ಹೇಳಲಿದ್ದ. ಆದರೆ ಅವರು ನಡುವೆಯೇ ತಡೆದು :

ಅವರ ಮಲಗಿಕೊಂಡಿದ್ದಾರೆ—ಅಂದರೆ ತಿಳಿಯೋದಿಲ್ಲವೇ? ಮುಂಜಾನೆಯಿಂದ ಮರುದಿನ ಮುಂಜಾನೆಯವರೆಗೂ ಈ ಜನರ ಕಾಟವೇ ತಪ್ಪುವುದಿಲ್ಲ. ರವಿವಾರವಾದರೂ ಬಿಡುವು ಬೇಡವೇ?....ಅವರೀಗ ಮಲಗಿಕೊಂಡಿದ್ದಾರೇ ಅಂದೆ. ನಿದ್ರೆ ಹತ್ತಿದೆ ಅವರಿಗೆ, ತಿಳಿಯಿತೇ? " ಮುಖ ತುಸು ಉಗ್ರವಾಗಿದ್ದಿತು.

" ಯಾವಾಗ ಏಳಬಹುದು ತಾಯೀ? "

" ನಾನೇನು ಭವಿಷ್ಯ ಹೇಳುವವಳೇ?— ಅವರು ಯಾವಾಗ ಎದ್ದರೂ ಈಗ ಅವರಿಗೆ ವೇಳೆ ದೊರೆಯದು, ಸಾಯಂಕಾಲ ಆರು ಗಂಟೆಯ ಶೋಕ್ಕೆ ಹೋಗಲಿದ್ದಾರೆ ಅವರು ! "

" ಐದೇ ನಿಮಿಷ ಭೆಟ್ಟಿಯಾಗಬೇಕಿತ್ತು; ಹಾಗಾದರೆ ನಾನು ಯಾವಾಗ ಬಂದರೆ ಒಳಿತಾದೀತು? "

" ಒಳಿತೆಲ್ಲಿಂದ ಬಂತು! " ಈ ಶನಿ ತೊಲಗಲೊಲ್ಲದಲ್ಲ— ಎಂದುಕೊಂಡರು-ಮನದಲ್ಲಿಯೇ. " ನಾಳೆ ನಾಡಿದ್ದು ಯಾವಾಗಲಾದರೂ ಕಾಲೇಜಿನಲ್ಲಿಯೇ ಭೆಟ್ಟಿಯಾಗು. " ಎಂದು ಬೇಸರದ ಧ್ವನಿಯಲ್ಲಿ ನುಡಿದರು. ಬಾಗಿಲು 'ಧಡಲ್' ಎಂದು ಸಪ್ಪಳ ಮಾಡಿತು. ಅವರು ತಮ್ಮಷ್ಟಕ್ಕೆ ತಾವೇ ಏನೋ ವಟಗುಟ್ಟುತ್ತ ಒಳಗೆ ನಡೆದರು.

ಬಾಗಿಲಿಕ್ಕಿದ ಸದ್ದಿಗೆ ಪ್ರೊಫೆಸರರಿಗೆ ಎಚ್ಚರವಾಯಿತು.

" ಏನು ಅದು? ಯಾರು ಬಂದಿದ್ದರು? ಹೋದರೋ ಕುಳಿತಿರುವರೊ? " ಕಣ್ಣುಜ್ಜಿಕೊಳ್ಳುತ್ತ ಕೇಳಿದರವರು.

" ಯಾರೇನು? ಈ ಜನರಿಗೆ ಕಿಂಚಿತ್ತಾದರೂ 'ಸಿವ್ಹಿಕ್ ಸೆನ್ಸೇ' ಇಲ್ಲ. ಮಲಗಿಕೊಂಡವರಿಗೆ ಬಂದು ತೊಂದರೆ ಕೊಡುವುದೆಂದರೆ ಇವರಿಗೆ ಯಾವ ದೋಷವೂ ಇಲ್ಲ! ಯಾವನೋ ವಿದ್ಯಾರ್ಥಿಯಂತೆ! ನೀವು ಮಲಗಿಕೊಂಡಿದ್ದಿರಿ, ಸುಮ್ಮನೆ ಎಬ್ಬಿಸುವುದೇಕೆಂದು ಹಾಗೆಯೇ ಕಳಿಸಿದೆ. "

ಪ್ರೊಫೆಸರರು ಗಡಿಯಾರದ ಕಡೆಗೆ ನೋಡಿದರು. ಆಗಲೇ ನಾಲ್ಕೂ ವರೆಯಾಗಿ ಹೋಗಿದ್ದಿತು.

“ಎಬ್ಬಿಸಿದ್ದರೇನೇ ಚೆನ್ನಾಗಿತ್ತು. ಬಹು ದೂರ ಹೋದನೇನು ಆತ?” ಎನ್ನುತ್ತ ಹಾಗೇ ಹೊರಗೆ ಬಂದರು.

ಬೀದಿಯಲ್ಲಿ ಸುಮಾರು ಮೂವತ್ತು ಹೆಜ್ಜೆಯ ಅಂತರದಲ್ಲಿ ಬೆನ್ನ ಮೇಲೆ ಹರಿದ ಶರ್ಟಿನ ತೊಟ್ಟ, ಲಂಡ ಚಣ್ಣದ ಹುಡುಗನೊಬ್ಬ ಕಾಲೆಳೆಯುತ್ತ ಹೊರಟಿದ್ದ. ನಡಿಗೆ ನೊಂದ ಮನದ ಸೂಚಕವಾಗಿದ್ದಿತು. ತಮ್ಮ ಕಡೆಗೆ ಬಂದವ ಆತನೇ ಇರಬೇಕೆಂದು ಅವರಿಗೆ ಹೊಳೆಯಿತು. ಆದರೆ ಆತನನ್ನು ಹೇಗೆ ಕರೆಯಬೇಕೆಂಬುದೇ ಅವರಿಗೆ ತಿಳಿಯಲಿಲ್ಲ. ಹೆಸರಂತೂ ಗೊತ್ತೇ ಇಲ್ಲ.

ಕೊನೆಗೆ ಎರಡು ಸಲ ಚಪ್ಪಾಳೆ ಬಾರಿಸಿದರು. ಆದರೆ ಅದರಿಂದೇನೂ ಉಪಯೋಗವಾಗಲಿಲ್ಲ. ಅದು ಆತನಿಗೆ ಕೇಳಿಸಿರಲಿಕ್ಕಿಲ್ಲ. ಓಡಿ ಹೋಗಿ ಕರೆಯಬೇಕು— ಎಂದಿತು, ಕಟು ಅನುಭವಗಳನ್ನುಂಡ ಅವರ ವಿಚಾರಶೀಲ ಮನಸ್ಸು. ಆದರೆ ಅವರು ಪ್ರೊಫೆಸರರು! ಅದರಲ್ಲಿಯೂ ಅದೇ ಮಲಗಿಕೊಂಡು ಎದ್ದ ಸ್ಥಿತಿಯಲ್ಲಿದ್ದವರು. ಮುಖ ಕೂಡ ತೊಳೆದಿರಲಿಲ್ಲ; ಅರಿವೆಗಳನ್ನೂ ಬದಲು ಮಾಡಿರಲಿಲ್ಲ. ಒಂದು ಕ್ಷಣದಲ್ಲಿ ಅನೇಕ ವಿಚಾರಗಳು ಸುಳಿದುಹೋದುವು ಅವರ ತಲೆಯಲ್ಲಿ. ಅಷ್ಟರಲ್ಲಿ ಆತ ಇನ್ನೂ ನಾಲ್ಕು ಹೆಜ್ಜೆ ಮುಂದೆ ಹೋಗಿದ್ದ. ಕೊನೆಗೆ ವಿವೇಕದಿಂದ ಸುಸಂಸ್ಕೃತವಾದ ಅವರ ಮನಸ್ಸು, ಅವರನ್ನು ಹತ್ತು ಹೆಜ್ಜೆ ಓಡುವಂತೆಯೇ ಮಾಡಿತು. ಆಗ ಅವರ ಕೈಚಪ್ಪಾಳೆಯ ಸಪ್ಪಳ ಕೇಳಿ ಆತ ತಿರುಗಿ ನೋಡಿದ. ತಿರುಗಿ ಬರುವಂತೆ ಅವರು ಕೈಸನ್ನೆ ಮಾಡಿದರು. ಆತ ಮರಳಿದ. ಇಬ್ಬರೂ ಮನೆ ಸೇರಿದರು.

“ಯಾರಪ್ಪಾ, ನಿನ್ನ ಹೆಸರೇನು?” ಪ್ರೊಫೆಸರರು ಕೇಳಿದಾಗ ಆತನ ಕಣ್ಣುಗಳಲ್ಲಿ ಎರಡು ತೊಟ್ಟು ನೀರೂರಿದ್ದಿತು. ಆತನ ಮನಸ್ಸು ಇಷ್ಟರಲ್ಲಿಯೇ ಪ್ರೊಫೆಸರರ ಮತ್ತು ಅವರ ಹೆಂಡತಿಯ ಸ್ವಭಾವಗಳನ್ನು ಹೋಲಿಸಿ ನೋಡಿ, ಅವರ ಕರಣಾಹೃದಯಕ್ಕೆ ತಲೆಬಾಗಿದ್ದಿತು. ಉಗುಳು ನುಂಗುತ್ತ ಆತ ಹೇಳಿದ.

" ನಾನೊಬ್ಬ ಬಡ ವಿದ್ಯಾರ್ಥಿ ಸರ್.... " ಮುಂದೆ ಮಾತು ಬರಲಿಲ್ಲ. ಕಣ್ಣೀರು ಹನಿಹನಿಯಾಗಿ ಕಪೋಲದಿಂದಿಳಿಯುತ್ತಿದ್ದುವು.

" ಪರವಾ ಇಲ್ಲ. " ಪ್ರೊಫೆಸರರ ಮನಸ್ಸು ಕಲಕಿತ್ತು. " ಕುಳಿತುಕೋ ಎರಡು ನಿಮಿಷ " ಎಂದು ಹೇಳಿ ಒಳಕ್ಕೆ ಹೋದರು.

ಅಡಿಗೆ ಮನೆಗೆ ಹೊಗಿ, " ನೋಡು, ನೀನೇನೋ ಬಿರುಸು ಮಾತನಾಡಿ ಕಳಿಸಿದ್ದೆ ಕಾಣ್ತದೆ, ಪಾಪ, ಆ ಹುಡುಗನಿಗೆ ತುಂಬಾ ದುಃಖವಾದಂತಿದೆ! " ಎಂದರು.

" ಸಾಕು, ಸಾಕು ಸುಮ್ನಿರಿ. ಇಂಥವರನೇಕರನ್ನು ಕಂಡಿದ್ದೇನೆ.... ....ಯಾಕೆ ಮೂರು ಕಪ್ಪುಗಳನ್ನೇಕೆ ತೆಗದುಕೊಂಡಿರಿ? ನಾನು ಎರಡೇ ಕಪ್ಪು ಚಹ ಮಾಡಿದ್ದೇನೆ! "

" ಆಗಲಿ, ನನಗಾದರೂ ಒಂದು ಕಪ್ಪು ಕೊಡುತ್ತೀಯಲ್ಲವೇ? ಅದರಲ್ಲಿಯೇ ಇಬ್ಬರಿಗೂ ತುಸು ತುಸು ಕೊಟ್ಟುಬಿಡು. ಮತ್ತೆ ಮಾಡುವ ತೊಂದರೆ ನಿನಗೂ ಬೇಡ." ಎಂದು ಮಾತು ಮುಗಿಸಿದರು.

ಶಾರದಮ್ಮ ತಮ್ಮ ಗಂಡನನ್ನೊಮ್ಮೆ ತೀಕ್ಷ್ಣವಾಗಿ ನೋಡಿದರು!

ಅದೆಷ್ಟು ಬೇಡ ಎಂದರೂ, ಪ್ರೊಫೆಸರರ ಒತ್ತಾಯಕ್ಕಾಗಿ ನಾರಾಯಣ — ಬಂದ ಹುಡುಗ — ಚಹ ಕುಡಿಯಲೇಬೇಕಾಯಿತು.

" ಹೂಂ, ಇನ್ನು ಹೇಳು. ನೀನು ಏತಕ್ಕಾಗಿ ಬಂದಿದ್ದೆ ಎಂದು."

" ನಿಮಗೆ ಬಹಳ ತೊಂದರೆ ಕೊಟ್ಟೆ ಸರ್, ಕ್ಷಮಿಸಿ! "

" ತೊಂದರೆಯೆಂತಹದಪ್ಪಾ! ನಿಮ್ಮಂಥ ವಿದ್ಯಾರ್ಥಿಗಳಿಗೆ ನನ್ನಿಂದ ಶಕ್ಯವಿದ್ದ ಎಲ್ಲ ಸಹಾಯವನ್ನೂ ನೀಡುವದು ನನ್ನ ಆದ್ಯ ಕರ್ತವ್ಯವೆಂದು ನಾನು ತಿಳಿದಿದ್ದೇನೆ. ಒಂದಾನೊಂದು ಕಾಲಕ್ಕೆ ನಾನೂ ಹೀಗೆಯೇ....... "

ನಾರಾಯಣ ಬೆರಗುಗಣ್ಣಿನಿಂದ ಪ್ರೊಫೆಸರರನ್ನೊಮ್ಮೆ ನೋಡಿದ. ಶಾರದಮ್ಮನಿಗೆ ಈ ಮಾತು ಕೇಳುತ್ತಲೇ ಅವರ ಕಿವಿ ನಿಮಿರಿದುವು! ತಮ್ಮ ಗಂಡನನ್ನೂ ನಾರಾಯಣನನ್ನೂ ಅವರ ಕಣ್ಣುಗಳು ಅವಿರಿಗರಿವಿಲ್ಲದೇ ನಿರೀಕ್ಷಿಸಿದ್ದುವು ಒಂದು ಕ್ಷಣ!

“ ಹೋಗಲಿ. ಈಗ ನಿನಗೇನಾಗಬೇಕು? ” ಪ್ರೊಫೆಸರರ ಮುಖ ದಿಂದ ನಿಡಿದಾದ ಉಸಿರೊಂದು ಹೊರಕ್ಕೆ ಬಂದಿತು.

“ ಇಲ್ಲಿಯ.... ಹಾಯಸ್ಕೂಲಿನಲ್ಲಿ ಆರನೆಯ ತರಗತಿಯಲ್ಲಿ ಓದುತ್ತಿ ದ್ದೇನೆ. ತೀರ ಬಡವ ಸರ್. ತಂದೆ-ತಾಯಿ ಯಾರೂ ಇಲ್ಲ. ‘ ವಾರ ’ ಹಚ್ಚಿಕೊಂಡು ಅವರಿವರಲ್ಲಿ ಉಣ್ಣುತ್ತೇನೆ. ಈಗ ಫ್ರೀಶಿಪ್ಪಿಗಾಗಿ ಅರ್ಜಿ ಮಾಡಬೇಕಾಗಿದೆ. ಅದಕ್ಕೆ ತಮ್ಮದೊಂದು ಸರ್ಟಿಫಿಕೇಟು ಇದ್ದರೆ ಒಳಿ ತೆಂದು ತಮ್ಮ ಕಡೆಗೆ ಬಂದೆ ಸರ್. ಅಷ್ಟು ಬರೆದುಕೊಟ್ಟರೆ... ಬಹಳ ಉಪಕಾರವಾಗುವುದು ! ”

“ ಆಗಾಗ ‘ ಉಪಕಾರ ’ ‘ ಉಪಕಾರ ’ ಎಂದೇಕೆ ಅನ್ನುತ್ತಿದ್ದೀ? ಅದೇನು ಮಹಾ? ಬರೆದುಕೊಡುತ್ತೇನೆ, ತೆಗೆದುಕೊಂಡು ಹೋಗುವೆ ಯಂತೆ ” ಎಂದು ಹೇಳಿ, ಅತನ ಪೂರ್ಣ ಹೆಸರು ಮುಂತಾದ್ದು ಕೇಳಿ, ಆತನ ಒಳ್ಳೇ ನಡತೆಯ ಬಗ್ಗೆ ಮತ್ತು ಆತನು ನಿಜವಾಗಿಯೂ ಬಡವ ನಿರುವನೆನ್ನುವ ಕುರಿತು ಮನವರಿಕೆ ಮಾಡಿಕೊಂಡು, ಅದರಂತೆ ಒಂದು ಪ್ರಶಂಶೆಯ ಪತ್ರ ಬರೆದುಕೊಟ್ಟರು.

“ ಆಗಲಿ ಸರ್, ತಮ್ಮ ಉಪ.... ” ನಾರಾಯಣನ ನಾಲಗೆ ತಡೆ ಯಿತು. “ ಬರುತ್ತೆನೆ. ಸರ್. ” ಎಂದ.

“ ಆಗಲಿ. ಹೋಗಿ ಬಾಪ್ಪಾ ! ಎಂದಾದರೂ ‘ ವಾರ ’ ದೊರೆಯ ದಿದ್ದರೆ ಇತ್ತ ಕಡೆಗೆ ಬಂದುಬಿಡು. ಏನೂ ಸಂಕೋಚಪಟ್ಟುಕೊಳ್ಳಬೇಡ” ಎಂದರು ಪ್ರೊಫೆಸರರು.

“ ಒಳ್ಳೇದು.... ” - ನಾರಾಯಣನ ಕಣ್ಣುಗಳು ಕೃತಜ್ಞತೆಯಿಂದ ಭಾರವಾದಂತಿದ್ದುವು.

ಆತ ಸಂಪೂರ್ಣ ಕಾಣದಂತಾಗುವ ವರೆಗೂ ಬಾಗಿಲಲ್ಲಿ ನಿಂತು ಪ್ರೊಫೆಸರರು ಆತನನ್ನೇ ನೋಡುತ್ತಿದ್ದರು. ತರುವಾಯ ನಿಟ್ಟುಸಿರಿನೊಂ ದಿಗೆ ಒಳಗೆ ಬಂದರು. ಎದುರಿಗೆ ಶಾರದಮ್ಮ ನಿಂತಿದ್ದರು. ದಿನದ ಇಪ್ಪ ತ್ತುನಾಲ್ಕು ತಾಸೂ ನಗುಮುಖವಾಗಿರುವ ಆ ಚೆನ್ನೆಯ ಮೊಗವೀಗ ಅದೇಕೋ ಕಳೆಗುಂದಿದ್ದಿತು. ರಾವ್ ಅವರು ಒಮ್ಮೆಲೇ ಕೇಳಿದರು :

“ ಏನಾಯಿತು ಶಾರದಾ? ”

“ ಏನೂ ಇಲ್ಲ! ”

“ ಹಾಗಾದರೆ ಹೀಗೇಕೆ ಸಪ್ಪೆಯಾಗಿದ್ದೀ? ”

“ ನಾನೊಂದು ಮಾತನ್ನು ಕೇಳಬೇಕೆಂದಿದ್ದೇನೆ. ಉತ್ತರ ಹೇಳುತ್ತೀರಾ? ”

“ ಹೀಗೇಕೆ ಕೇಳುತ್ತಿದ್ದೀ ಶರೂ? ”

“ ನೀವು ಹೇಳುವುದಿಲ್ಲ ಎಂದು ತಿಳಿದು ನಾನೀಗ ಹಾಗೆ ಕೇಳುತ್ತಿರುವುದಿಲ್ಲ. ಆದರೆ ಅದರಿಂದ ತಮ್ಮ ಮನಸ್ಸಿಗೆ ತೊಂದರೆಯಾದೀತೆಂದು....”

“ ಶಾರದಾ, ನನ್ನೆದುರಿಗೆ ನೀನಿರುವಾಗ ನನಗೆಂಥ ತೊಂದರೆಯೂ ಕಂಡುಬರಲಾರದು! ” ಅವರ ನುಡಿಯಲ್ಲಿ ಕೃತಕತೆ ಇದ್ದಂತೆ ತೋರಲಿಲ್ಲ. “ ನೀನೇನು ಕೇಳಬೇಕೆಂದಿದ್ದೆ? ”

“ ಇದೀಗ ಆ ಹುಡುಗನ ಸಂಗಡ ಮಾತನಾಡುತ್ತಿರುವಾಗ ನನ್ನ ಕಿವಿಗಳೊಂದು ಮಾತನ್ನು ಕೇಳಿದುವು. ನಾನೇನೂ ಮರೆಗೆ ನಿಂತು ಕೇಳಲಿಲ್ಲ; ಆದರೆ ಮಾತು ತಾನೇ ಕೇಳಿಸಿತು. ”

“ ಏನದು ಆ ಮಾತು? ”

“ ಒಂದಾನೊಂದು ಕಾಲಕ್ಕೆ ನಾನೂ ಹೀಗೆಯೇ .... ’ ಎಂದು ಏನೋ ಹೇಳಲಿದ್ದ ನೀವು ಒಮ್ಮೆಲೇ ತಡೆದಿರಿ..... ”

ಪ್ರೊಫೆಸರರ ಮುಖಭಾವ ಒಮ್ಮೆಲೇ ಬದಲಾಯಿತು. ಒಂದು ನಿಮಿಷ ತಡೆದು ಹೇಳಿದರು, “ ನಮ್ಮ ಮದುವೆಯ ಪೂರ್ವದಲ್ಲಿಯೇ ನಿನಗೊಮ್ಮೆ ನಾನು ಒಂದು ವಿಚಾರ ಹೇಳಿದ್ದೆ; ನೆನಪಿದೆಯೇ? ”

“ ಏನೆಂದು? ”

“ ನಾನು ಬಡವ ಎಂದು! ”

“ ಅಂದರೆ....? ”

“ ಹೌದು; ಇದೀಗ ಬಂದ ನಾರಾಯಣನಂತೆಯೇ, ಅದೇಕೆ ಆತನಿಗಿಂತಲೂ ಕಠಿಣ ಪರಿಸ್ಥಿತಿಯನ್ನು ಎದುರಿಸಿದ್ದೇನೆಂದು ಹೇಳಿದರೆ, ನಿನಗೆ ಅಪಮಾನವೆನಿಸಲಿಕ್ಕಿಲ್ಲವಷ್ಟೇ? ”

" ಅದೇಕೆ, ನನಗೇಕೆ ಅಪಮಾನವಾಗಬೇಕು ? "

" ಬಡವನೊಬ್ಬನ ಹೆಂಡತಿಯಾಗಿರುವುದು ಅವಮಾನವೆಂದು ತಿಳಿಯುವವರೂ ಅನೇಕರಿದ್ದಾರೆ, ಶಾರದಾ! "

" ಅಲ್ಲ, ನಿಮಗೆ ಬಡವರೆಂದಾದರೂ ಯಾರು ಅನ್ನಬೇಕು? "

" ಆದರೂ, ನಾನು ನಿನಗೆ ಸಿರಿವಂತಿಕೆಯ ಸುಖವನ್ನು ಮಾತ್ರ ಕೊಡಲಾರೆ. ನನ್ನಲ್ಲಿ ಆ ಹೆಮ್ಮೆ ಇಲ್ಲ! "

ಪ್ರೊಫೆಸರರು ಒಂದು ನಿಮಿಷ ತಡೆದು, " ನೀನು ಇದೀಗ ನಾರಾಯಣನನ್ನು ಹಾಗೇಕೆ ಕಳುಹಿಸಿದೆ? ನನ್ನನ್ನು ಆಗ ಎಬ್ಬಿಸಿದ್ದರೆ ನನಗೇನಾಗುತ್ತಿತ್ತು? "

" ನಿಮಗೆ ತೊಂದರೆಯಾಗಬಾರದೆಂದು ಹಾಗೆ ನಾನು ಆತನನ್ನು ಕಳಿಸಿದ್ದೆ. ಅದೇ ಮಲಗಿದ್ದಿರಿ. ತುಸು ವಿಶ್ರಾಂತಿಯಾದರೂ ಬೇಡವೇ? "

" ಶಾರದಾ, ಇಂಥ ಮಾತು ಬೇಡ. ನೀನಿನ್ನೂ ನನ್ನನ್ನು ಸರಿಯಾಗಿ ತಿಳಿದುಕೊಂಡಿಲ್ಲ. ಆಜನ್ಮದಿಂದಲೂ ಸಿರಿವಂತಿಕೆಯಲ್ಲಿ ಬೆಳೆದವರಿಗೆ ಬಡತನದ ಬೇಗೆಯ ಅರಿವಾಗಲಾರದು. ........"

ಪ್ರೊಫೆಸರರ ಮುಖದಿಂದ ನಿಟ್ಟುಸಿರೊಂದು ಹೊರಬಿದ್ದಿತು. ಶಾರದಮ್ಮ ಮೌನವಾಗಿದ್ದರು.

ಎರಡು ನಿಮಿಷ ತಡೆದು, " ಹೋಗಲಿ, ಅದೆಲ್ಲಾ ತೊಂದರೆ ನಿನಗೇಕೆ? ಈಗೇನು ಶೋಕ್ಕೆ ಹೋಗುವುದೋ? "

" ............ "

" ಯಾಕೆ, ಇಚ್ಛೆಯಿಲ್ಲವೇನು? ಹಾಗಾದರೆ ಬಿಟ್ಟುಬಿಡು! ನಾನು ಹಾಗೆಯೇ ಸ್ವಲ್ಪ ಅಡ್ಡಾಡಿ ಬರುತ್ತೇನೆ. " ಎಂದು ಬಟ್ಟೆ ಬದಲಾಯಿಸಿ ಏನೂ ಮಾತನಾಡದೆ ಹೊರಟುಹೋದರು. ಪ್ರೊಫೆಸರರ ಧ್ವನಿಯಲ್ಲಿ ನಡಿಗೆಯಲ್ಲಿ ಸಿಡುಕು ತುಂಬಿತ್ತು!

ಹೀಗೆ ಸಿಡುಕಿನಿಂದ ಅವರು ವರ್ತಿಸಿದುದು ಅವರ ಜೀವನದಲ್ಲಿಯೇ ಇದು ಮೊದಲ ಸಲ. ಶಾರದಮ್ಮನ ಉದ್ವೇಗ ಉಕ್ಕಿ ಬಂತು! ಕಣ್ಣೀರ ಹೊಳೆಯೇ ಹರಿದಂತಾಯ್ತು! —

ಅಂದು ಹುಣ್ಣಿಮೆಯ ರಾತ್ರಿಯಾಗಿದ್ದರೂ ಶುಭ್ರವಾದ ಬೆಳುದಿಂಗಳು ಬಿದ್ದಿರಲಿಲ್ಲ. ಆಕಾಶದಲ್ಲಿ ಚಂದಿರನು ಮೋಡಗಳಲ್ಲಿ ಮರೆಯಾಗಿ ಸಪ್ಪೆಯಾಗಿದ್ದ. ಶಾರದೆಯ ಹೃದಯಚಂದ್ರ ಕೂಡ ದುಗುಡದ ಮೋಡಗಳಲ್ಲಿ ಸಿಲುಕಿ ಕಳೆಗುಂದಿದ್ದ. ರಾತ್ರಿ ಹನ್ನೆರಡು ಹೊಡೆದು ಹೋಗಿದ್ದರೂ ಅವಳಿಗಿನ್ನೂ ನಿದ್ರೆ ಹತ್ತಲೊಲ್ಲದು.

ತನ್ನ ಮದುವೆಯಾಗಿ ಎರಡು ವರ್ಷಗಳ ಅವಧಿಯಲ್ಲಿ ಶಾರದೆ ಈ ದಿನದಂತಹ ಕಟು ಅನುಭವವನ್ನು ಎಂದೂ ಎದುರಿಸಿರಲಿಲ್ಲ. ಅವಳು ಕಾಲೇಜಿನಲ್ಲಿದ್ದಾಗ 'ಅವರು' ತನ್ನೊಡನೆ ವರ್ತಿಸುತ್ತಿದ್ದ ರೀತಿ ಅವಳ ಕಣ್ಣೆದುರು ಹಾಯ್ದು ಹೋಯಿತು.

ಆಗ ಶಾರದೆಯೆಂದರೆ ಅವರಿಗೆ ಪ್ರಾಣ. ಅವರೆಂದರೆ ಶಾರದೆಯ ಉಸಿರು! ಅದು ಕಾರಣವೇ—ತನ್ನ ಪ್ರೇಮದ ಸಲುವಾಗಿ ಕಾತರಗೊಂಡು ಕುಳಿತ ಜಹಗೀರದಾರದಾರನನ್ನೂ ತ್ಯಜಿಸಿ—ಇವರನ್ನು ವರಿಸಲು ಒಪ್ಪಿದ್ದಳು ಶಾರದೆ.

ಆದರೆ ಅವರ ಇಂದಿನ ನಡತೆ....?

ಇದುವೇ ಏನು ಅವರ ಪ್ರೇಮದ ಕುರುಹು....?

ಏನೋ ಒಂದು ಕ್ಷುಲ್ಲಕ ಕಾರಣಕ್ಕಾಗಿ ತನ್ನ ಮೇಲೆ ಅಷ್ಟು ಕೋಪವೇ? ಸಾಯಂಕಾಲದಿಂದ ಮಾತನ್ನೇ ಆಡದೆ ಇರುವುದೆಂದರೆ....! ಇಂಥ ಕಠಿಣ ಶಿಕ್ಷೆಯನ್ನು ಕೊಡಲಿಕ್ಕೆ ತನ್ನ ಅಪರಾಧವಾದರೂ ಏನು? ಯಾವುದೋ ಒಬ್ಬ ಪೋರ ಬಂದಾಗ, ಅವರಿಗೇ ತೊಂದರೆಯಾಗಬಾರದೆಂದು ಎಬ್ಬಿಸದೆ ಆತನನ್ನು ಹಾಗೇ ಕಳಿಸಿದರೆ, ಅದರಲ್ಲಿ ತನ್ನ ತಪ್ಪೇ? ಅದಕ್ಕೆ ಇಂಥ ಶಿಕ್ಷೆಯೇ! ಅವರಿಗೆ ತನಗಿಂತ ಆ ಬಡ ಹುಡುಗನೇ ಹೆಚ್ಚೇ ?

ನಾನಿನ್ನೂ ಅವರ ಸ್ವಭಾವವನ್ನರಿತಿಲ್ಲವಂತೆ! ಅರಿಯದೆ ಅವರನ್ನು ಪ್ರೇಮಿಸಿದೆನೇ? ........

ಅವಳ ವಿಚಾರ ಮುಂದೆ ಹರಿಯಲಿಲ್ಲ. ದುಃಖ ಉಕ್ಕಿ ಬಂದು ಕಣ್ಣೀರಾಗಿ ಹರಿಯಿತು. ಅರ್ಧ ತಾಸು ಹಾಗೇ ಬಿಸಿಸುಯ್ಯುತ್ತ ಹಾಸಿಗೆಯಲ್ಲಿ ಹೊರಳಾಡಿದಳು.

ಗಡಿಯಾರ 'ಢಣ್' ಎಂದು ಒಂದು ಗಂಟೆ ಬಾರಿಸಿತು. ಶಾರದೆ ಮೆಲ್ಲಗೆ ಎದ್ದು ದೀಪ ಹಚ್ಚಿದಳು.

ತನ್ನಲ್ಲಿ ಸವತಿ ಮತ್ಸರ ಸಾಧಿಸುವುದಕ್ಕೋಸುಗ ಅವರನ್ನು ನಿದ್ರೆಯ ಹೆಣ್ಣು ವಶಮಾಡಿಕೊಂಡಂತೆ ತೋರಿತು, ಶಾರದೆಗೆ ಒಂದು ಕ್ಷಣ. ಅವರು ಗಾಢನಿದ್ರೆಯಲ್ಲಿ ಒಂದಾಗಿದ್ದರು.

ಆದರೆ ತನಗೆಲ್ಲಿಯ ನಿದ್ರೆ ?

ಅವಳ ದೃಷ್ಟಿ ಟೇಬಲ್ಲಿನ ಕಡೆಗೆ ಹರಿಯಿತು. ಅಲ್ಲೊಂದು ಹಸಿರು ಬಣ್ಣದ ನೋಟಬುಕ್ಕು. ಆಗಾಗ ಅವರು ಅದರಲ್ಲಿ ಏನೋ ಬರೆಯು ತ್ತಿರುವದನ್ನವಳು ಕಂಡಿದ್ದಳು. ಅದೇನೆಂದು ಕೇಳಿದ್ದಳು ಕೂಡ. ಆದರೂ ಅವರು ಅದನ್ನು, ಏನೋ ಕಾರಣ ಹೇಳದೆ ಮುಚ್ಚಿಡುತ್ತಿದ್ದರು.

ಏಕೆ? ಅದರಲ್ಲೇನಿರಬಹುದು? ತನ್ನ ಸರ್ವಸ್ವವನ್ನೇ ಇವರಿಗರ್ಪಿಸಿದ ತನಗೆ ಕೂಡ ತೋರಿಸದಂತಹದೇನಿರಬಹುದು ಅದರಲ್ಲಿ? ಅವಳ ಕಾಲು ಗಳು ಮೆಲ್ಲಗೆ ಟೇಬಲ್ಲಿನ ಕಡೆಗೆ ನಡೆದುವು. ಆದರೆ ಮನಸ್ಸು "ಬೇಡ, ಅವರನ್ನು ಕೇಳದೆ ಅದನ್ನು ಮುಟ್ಟಬೇಡ." ಎಂದಿತು.

ಕಣ್ಣು ಅವರೆಡೆಗೆ ತಿರುಗಿದುವು. ಸುಖವಾಗಿ ನಿದ್ರಿಸುತ್ತಿದ್ದರು ಅವರು. ಅವಳ ಕೈಗಳು ಆ ಪುಸ್ತಕವನ್ನೆತ್ತಿಕೊಂಡವು. ಅದು ಅವರ ದಿನಚರಿ ಯಾಗಿದ್ದಿತು. ಅದೇ ಬರೆದು ಹಾಗೇ ಮರೆತು ಇಟ್ಟು ಮಲಗಿದ್ದರೇನೋ! ಕೊನೆಯ ಪುಟದಲ್ಲಿ ಪೆನ್ನು ಕೂಡ ಹಾಗೇ ಇತ್ತು ಅದರಲ್ಲಿ.

ಪುಸ್ತಕವನ್ನು ತೆರೆದ ಕೂಡಲೇ ಅಂದಿನ ದಿನಾಂಕವನ್ನೇ ಕಾಣಿಸಿ ಬರೆದುದು ಕಂಡಿತು. ಓದಬೇಕೆಂದು ಕಣ್ಣುಗಳು ತವಕಗೊಂಡುವು. ವಿವೇಕ 'ಬೇಡ' ಎಂದಿತು. ಆದರೆ ಕುತೂಹಲ ಕೆರಳಿತು. "ಏನು ಬರೆದಿರ ಬಹುದು! ನೋಡಿದರೆ ತಪ್ಪೇನು ? ........" ಶಾರದೆ ಓದತೊಡಗಿದಳು!

"ದಿನಾಂಕ ೮-೪-೧೯೫೦.

ರಾತ್ರಿ ೯-೪೫,

ತಾರುಣ್ಯದಲ್ಲಿ ಮನುಷ್ಯನ ಬುದ್ಧಿ ಮಂಕಾಗುತ್ತದೆಂದು ಹೇಳುವುದು ಸುಳ್ಳಲ್ಲ!

ಹಾಗಾದರೆ ನಾನು ಶಾರದೆಯನ್ನು ಮದುವೆಯಾದುದು ತಪ್ಪೇ ? ಅವಳಲ್ಲಿ ಯಾವ ಕೊರತೆಯಿದೆ ? ರೂಪವಿದೆ; ಅದಕ್ಕೆ ಪೂರಕವಾಗಿ ವಿದ್ಯೆಗೂ ಕೊರತೆಯಿಲ್ಲ. ಆಗರ್ಭ ಸಿರಿವಂತಳು ! ಹೌದು. ಅದೇ ಬೇಡ ವಾಗಿತ್ತು. ಆ ಸಿರಿವಂತಿಕೆಯೇ ಅವಳಲ್ಲಿಯ ಕುಂದು.

ಈ ವಿಚಾರ ನನಗೆ ಮೊದಲು ಬರಲಿಲ್ಲ. ಅವಳ ಆ ಸಿರಿವಂತಿಕೆಯ ಸಿಡುಕು ಸ್ವಭಾವವನ್ನು ತಿದ್ದಬಹುದೆಂದು ಬಗೆದಿದ್ದೆ. ಆದರೆ, ಅದೇ ಈಗ ನಮ್ಮಿಬ್ಬರಲ್ಲಿ ವೈಮನಸ್ಯವನ್ನುಂಟು ಮಾಡುತ್ತಿದೆ. ಶಾರದೆಗೆ ಬಡವರೆಂದರೆ ಕಿಂಚಿತ್ತಾದರೂ ಕರುಣೆಯಿಲ್ಲ. ಕರುಣೆಯಿಲ್ಲದಿದ್ದರೆ ಹೋಗಲಿ. ತಿರಸ್ಕಾರವೇಕೆ? ಇಂದು ಪಾಪ 'ನಾರಾಯಣ' ಬಂದರೆ, ಅವನನ್ನು ತಿರಸ್ಕಾರದಿಂದ ಅಟ್ಟಿ, ಬಾಗಿಲು ಹಾಕಬೇಕೆ? ನನ್ನನ್ನು ಎಬ್ಬಿಸಿದ್ದರೆ ನಾನೇನು ಸಾಯುತ್ತಿದ್ದೆನೇ ?"

ಶಾರದೆಯ ಎದೆಯಲ್ಲಿ ಕೂರಂಬಿನಿಂದಿರಿದಂತಾಯಿತು! ಅವರು ಇಷ್ಟು ಕಠೋರವಾಗಿ ಆಡಬಹುದೆಂದು ಅವಳೆಂದಿಗೂ ಎಣಿಸಿರಲಿಲ್ಲ. ಕಣ್ಣಂಚಿನಲ್ಲಿ ನೀರು ಮೂಡಿತು; ಒಂದು ಕ್ಷಣ ಅಕ್ಷರಗಳು ಮಸುಕು ಮಸುಕಾದುವು! .... ಎರಡು ನಿಮಿಷ ತಡೆದು ಮತ್ತೆ ಓದಿದಳು:

"....ಮತ್ತೆ, ನನ್ನ ಹಿತಕ್ಕಾಗಿ ಆತನನ್ನು ಕಳಿಸಿದಳೆಂದು ಸುಳ್ಳು ಹೇಳಬೇಕೆ? ಕಹಿ ಕ್ವಿನೈನಿನ ಮೇಲೆ ಈ ಸಕ್ಕರೆಯ ಹೊದಿಕೆಯೇಕೆ? ಮನುಷ್ಯನ ಮನುಷ್ಯತ್ವ ಏತರಲ್ಲಿದೆ? ಕೇವಲ ತಾನು ಮತ್ತು ತನ್ನವರಷ್ಟು ಸುಖವಾಗಿದ್ದರೆ ಸಾಕೆ? ಶಾರದೆಯಲ್ಲಿ ಇಷ್ಟು ಚಿಕ್ಕ ವಿಚಾರಗಳೇಕೆ? ನಾನೆಂದಿಗೂ ಹಾಗೆ ಬಗೆದಿರಲಿಲ್ಲ. ಎಲ್ಲರೂ ಇಂಥ ವಿಚಾರಗಳನ್ನೇ ಮಾಡುತ್ತಿದ್ದರೆ, ನಾನು ಈ ಮಟ್ಟದಲ್ಲಿರಲು ಎಂದಾದರೂ ಸಾಧ್ಯವಾಗುತ್ತಿತ್ತೇ?

ಶಾರದೆ ನನ್ನ ಬಾಲ್ಯವನ್ನು ಕಂಡಿದ್ದರೆ, ನನ್ನನ್ನು ಅವಳು ಮದುವೆಯಾಗಬಹುದಿತ್ತೆ? ಹುಟ್ಟಿ ನಾಲ್ಕು ವರ್ಷಗಳಲ್ಲಿ ತಂದೆ-ತಾಯಂದಿರನ್ನು ಕಳೆದುಕೊಂಡು ಯಾರದೋ ಮನೆಯಲ್ಲಿ ಬೆಳೆದು ಯಾರದೋ ದಯೆಯಿಂದ ವಿದ್ಯಾಭ್ಯಾಸ ಕೊನೆಗಾಣಿಸಿದ ನನಗೆ, ದಾತಾರರು ದೊರೆಯದೆ ಹೋಗಿದ್ದರೆ..........?

ಅದೆಷ್ಟು ದಿನಗಳನ್ನು ಒಂದೇ ಹೊತ್ತು ಉಂಡು ಕಳೆದಿಲ್ಲ! ಕಾಲೇಜಿನ ಕಟ್ಟೆ ಏರಿದರೂ ಕೂಡ ಎರಡನೆಯವರ ಪುಸ್ತಕಗಳನ್ನೇ ಉಪಯೋಗಿಸುತ್ತಿದ್ದೆನೇ ವಿನಃ ಒಂದು ವರ್ಷ ಕೂಡ ಹತ್ತು ರೂಪಾಯಿ ಖರ್ಚುಮಾಡಿ ಪುಸ್ತಕ ಕೊಳ್ಳಲಾಗಲಿಲ್ಲ. ಆ ಮೇಲೆ ಸ್ಕಾಲರ ಶಿಪ್ಪು ದೊರೆತು, ಇದ್ದುದರಲ್ಲಿಯೇ ತುಸು ಹಾಯಾಗಿ ಇರಲಿಕ್ಕೆ ಸಾಧ್ಯವಾಯಿತು; ಅದೂ ಕೂಡ ಸಲಹಿದವನೊಬ್ಬನ ಸಹಾಯದಿಂದಲೇ!

ನನ್ನ ಹೆಸರು ಕೂಡ ನನಗೆ ಸಂಕಟಜನಕವಾಗಬೇಕೇ? ಒಮ್ಮೆ ಒಬ್ಬ ಸಿರಿವಂತರಲ್ಲಿ ಊಟಕ್ಕಾಗಿ ಒಂದು 'ವಾರ' ಕೇಳಬೇಕೆಂದು ಹೋಗಿದ್ದೆ. ಅವರು ನನ್ನ ಹೆಸರು ಕೇಳಿ,

"ಓಹೋ!" ಎಂದು ಉದ್ಗಾರ ತೆಗೆದು, "ನೋಡ್ರಿ ರಾವ್, ನಾವೆಲ್ಲರೂ ಈ ತಿಂಗಳು ಊರಿಗೆ ಹೋಗಬೇಕೆಂದು ಮಾಡಿದ್ದೇವೆ. ಬಂದ ಮೇಲೆ ವಿಚಾರಿಸೋಣವಂತೆ." ಎಂದುಬಿಟ್ಟು, ನನ್ನನ್ನು ಹಾಗೇ ಕಳು ಹಿದ್ದರು. ಅವರು ಹಾಗೇಕೆ ಹೇಳಿದರೆಂಬುದು ಹಿಂದಿನಿಂದ ಗೊತ್ತಾಯಿತು. ನನ್ನ ಹೆಸರು ಕೇಳಿ, ನಾನು ಸಿರಿವಂತನಿದ್ದು ಈ ಸೋಗು ಹಾಕಿರ ಬೇಕೆಂದುಕೊಂಡಿದ್ದರಂತೆ.

ನನ್ನ ಸುದೈವ! ಬಿ. ಎ. ದಲ್ಲಿ ಒಂದನೆಯ ತರಗತಿಯಲ್ಲಿ ಪಾಸಾಗಿ ಕಾಲೇಜಿನ ಫೆಲೋಶಿಪ್ಪು ದೊರೆಯಿತು. ಆಗ ಜನ ನನ್ನ ಕಡೆಗೆ 'ಈತನೂ ಒಬ್ಬ ಮನುಷ್ಯ' ಎಂದು ನೋಡತೊಡಗಿತು. ಶಾರದೆಯ ಪರಿಚಯವಾದುದೂ ಆ ತರುವಾಯವೇ. ಅವಳ ಸಖ್ಯ ಈ ರೀತಿ ವಿವಾ ಹದಲ್ಲಿ ಕೊನೆಗೊಳ್ಳಬಹುದೆಂದು ನಾನೆಂದಿಗೂ ಬಗೆದಿರಲಿಲ್ಲ. ನಾನಾ ದರೋ ಇಂಥ ದರಿದ್ರ; ಅವಳ ತಂದೆ ನನ್ನಂಥ ನೂರು ಜನರನ್ನು ಸಾಕಲು ಶಕ್ತಿಯುಳ್ಳವರು! ಆದರೂ ವಿಧಿಯೇ ನಮ್ಮಿಬ್ಬರನ್ನು ಒಂದುಗೂಡಿಸಿತು. ಅವಳ ತಂದೆ ನನ್ನ ವಿದ್ಯೆಗೆ ಮೆಚ್ಚಿ ತಮ್ಮ ಮಗಳನ್ನು ನನಗೆ ಕೊಟ್ಟ ರೇನೋ ನಿಜ; ಆದರೆ ಶಾರದೆ ಏತಕ್ಕಾಗಿ ನನಗೆ ಒಲಿದಳೋ ನನಗಿನ್ನೂ ತಿಳಿಯಲೊಲ್ಲದು! ........"

ತಾನು ಏತಕ್ಕಾಗಿ ಅವರನ್ನು ಮೆಚ್ಚಿದೆನೆಂದು ಶಾರದೆ ತನ್ನನ್ನು ತಾನೇ ಕೇಳಿಕೊಂಡಳು. ಆ ಪ್ರಶ್ನೆಗೆ ಮಾತ್ರ ಖಚಿತವಾದ ಉತ್ತರ ದೊರೆಯಲಿಲ್ಲವಳಿಗೆ. ಆದರೆ ಅವರ ಶಾಂತಿಯುತವಾದ ನಗುಮೊಗ ಮಾತ್ರ ಅವಳ ಕಣ್ಮುಂದೆ ನುಸುಳಿ ಹೋಯಿತು. ಪಕ್ಕದಲ್ಲಿ ಮಲಗಿಕೊಂ ಡಿದ್ದ ಪತಿಯನ್ನೊಮ್ಮೆ ಕಣ್ಣೆತ್ತಿ ನೋಡಿದಳು. ಅದೇ ಮೊಗ, ಅದೇ ಗಾಂಭೀ ರ್ಯ, ಅದೇ ತೇಜಸ್ಸು. 'ಇಂಥವರನ್ನು ಮೆಚ್ಚದೆ ಇನ್ನಾರನ್ನು ಮೆಚ್ಚಲಿ?' ಎಂದುಕೊಂಡಿರಬೇಕು ಅವಳ ಮನಸ್ಸು! ಶಾರದೆ ಮತ್ತೆ ಓದತೊಡಗಿದಳು.

"ಶಾರದೆಯ ರೂಪಕ್ಕೆ ನಾನು ಮಾರು ಹೋದೆ. ಅವಳು ನನ್ನ ಬ[illegible] ಬಾಳದೋಣಿಯನ್ನು ಈ ಸಂಸಾರಸಾಗರದಲ್ಲಿ ಜಾಣ್ಮೆಯಿಂದ ನಡೆಯಿಸಿ

ನೆನ್ನನ್ನು ನಲುಮೆಯಿಂದ ದಂಡೆಗೆ ಕಾಣಿಸಬಲ್ಲಳೇ ಎಂಬ ವಿಚಾರವನ್ನು ನಾನು ಮೊದಲು ಮಾಡಲಿಲ್ಲ. ಹಾಗೆ ವಿಚಾರಿಸಿದ್ದರೆ ಏನಾಗುತ್ತಿತ್ತೋ...!

ಆದರೆ ಈಗ ಕ್ಷಣಕ್ಷಣಕ್ಕೆ ಎದ್ದು ಕಾಣತೊಡಗಿದೆ .... ಅವಳ ನನ್ನ ಸ್ವಭಾವದಲ್ಲಿ ವ್ಯತ್ಯಾಸ. ಏನಾದರೂ ಅವಳು ಆಗರ್ಭ ಸಿರಿವಂತರ ಮಗಳು. ಅವಳಿಗೆ ಬಡವರ ಬವಣೆ ಹೇಗೆ ತಿಳಿದೀತು? ತಿಳಿಯಲಾರದು. ನಿಜ. ಆದರೂ ಅವಳು ತಿಳಿಯಲು ಯತ್ನಿಸಬೇಡವೇ?

ಆ ಬಡ ನಾರಾಯಣನ ಸಂಗಡ ಅದೆಷ್ಟು ತಿರಸ್ಕಾರದಿಂದ ವರ್ತಿಸಿದಳು ಶಾರದೆ! ಆ ಕ್ಷಣದಿಂದ ಅದೇಕೋ ಬಹಳೇ ವೇದನೆಯಾಗುತ್ತಲಿದೆ ಹೃದಯದಲ್ಲಿ. ನನ್ನ ಹಿಂದಿನ ಜೀವನವೆಲ್ಲ ನೆನಪಾಗಿ, ಇನ್ನೂ ದುಃಖವಾಗುತ್ತಲಿದೆ! ಯಾರ ಮುಂದೆ ಹೇಳಲಿ? ಶಾರದೆಗೆ ಹೇಳಿದರೆ ಅವಳಿಗೆ ಅರಿವಾಗಬಹುದೇ? ಎಂದಿಗೂ ಅಸಾಧ್ಯ! ಬಡವರಾಗಿ ಬಂದವರಿಗೆ ಒಂದು ಕಪ್ಪು ಚಹ ಕೊಡಬೇಕಾದರೆ ಅವಳ ಮುಖ ಗಂಟಿಕ್ಕುತ್ತದೆ. ಇಂಥವಳ ಸಂಗಡ ಈ ರೀತಿ ಜೀವನ ನೂಕುವುದು ಕಠಿಣವೆನಿಸುತ್ತಲಿದೆ........ ಆದರೆ.... ಆದರೇನು???"

"...................."

"ಆದರೇನೂ ಇಲ್ಲ." ಶಾರದೆ ಅರಿವಿಲ್ಲದೆ ಗಟ್ಟಿಯಾಗಿ ನುಡಿದಳು.

ಪ್ರೊಫೆಸರರು ಒಮ್ಮೆಲೇ ಎಚ್ಚತ್ತರು. ಕಣ್ಣು ತೆರೆದು ನೋಡುತ್ತಾರೆ.... ಹೆಂಡತಿ ಬದಿಗೆ ಕುಳಿತಿದ್ದಾಳೆ. ಕಣ್ಣಿನಿಂದ ನೀರಿಳಿಯುತ್ತಿದೆ. ಕೈಯ್ಯಲ್ಲಿ ತಮ್ಮ ಡೈರಿ! ಅವಳು ಎಲ್ಲವನ್ನೂ ಓದಿದಳೆಂದು ತಿಳಿಯಲಿಕ್ಕೆ ತಡವಾಗಲಿಲ್ಲ.

ಎದ್ದು ಕುಳಿತು "ಶಾರದಾ..." ಎಂದರು.

ಶಾರದೆಯ ದುಃಖ ಮಿತಿಮೀರಿತು. ಅವಳ ಮಾತು ಮೂಕಾಗಿದ್ದಿತು! ಅವರೆದೆಯಲ್ಲಿ ತನ್ನ ಮೊಗವನ್ನಿರಿಸಿ ಆಕೆ ಗಟ್ಟಿಯಾಗಿ ಅತ್ತುಬಿಟ್ಟಳು.

"ಕ್ಷಮಿಸಿ, ನಿಮ್ಮ ಡೈರಿ ಓದಿದೆ. ಓದಿದ್ದು ತಪ್ಪಾಯಿತು. ನಿಜ. ಆದರೆ ಒಪ್ಪಿಗೆ ದಾರಿಯಾಯಿತು." ಎಂದಳು ದುಃಖದ ಆವೇಗ ಕಡಮೆಯಾಗುತ್ತಿರುವಾಗ.

ಇಷ್ಟು ಕಾಲ ಗಂಭೀರವಾಗಿ ಕುಳಿತ ಪ್ರೊಫೆಸರರಿಗೆ ಅದೇನೋ ಉದ್ವೇಗ ಹೊರಹೊಮ್ಮಿತು: "ಶಾರದಾ, ನಿಜವಾಗಿಯೂ ಹೇಳುತ್ತಿದ್ದೀಯಾ?" ಎಂದರು.

"ನನ್ನಲ್ಲಿ ವಿಶ್ವಾಸವಿರಲಿ. ನೀವು ಈ ದಿನ ಬರೆದುದನ್ನಷ್ಟೇ ಓದಿದೆ. ಈಗ ನಾನು ಮೊದಲಿನ ಲಕ್ಷಾಧೀಶರ ಮಗಳಾದ ಶಾರದೆಯಲ್ಲ; ಆದರೆ ದೀನ ಮಿತ್ರರಾದ ಪ್ರೊ. ರಾವರ ಮಮತೆಯ ಮಡದಿ ಶರೂ!" ಇಷ್ಟು ಹೇಳಬೇಕಾದರೆ ಅವಳ ಗಂಟಲ ಶಿರ ಉಬ್ಬಿ ಬಂದಿದ್ದುವು.

"ಶರೂ, ಶರೂ, ನನ್ನ ಶರೂ, ನಾನೀಗ ಎಲ್ಲ ದೃಷ್ಟಿಯಿಂದಲೂ ಧನ್ಯ." ಎಂದು ಹೆಂಡತಿಯನ್ನು ಬಿಗಿದಪ್ಪಿದನು.

ಕಣ್ಣುಗಳನ್ನು ಒರೆಸಿಕೊಂಡು ಶಾರದೆ ತನ್ನ ಪತಿಯ ಕಡೆಗೊಮ್ಮೆ ನೋಡಿದಳು. ಅವರ ಕಣ್ಣು ಕಿಲಕಿಲನೆ ನಗುತ್ತಲಿದ್ದುವು. ಆ ಕಣ್ಣ ಕಾಂತಿಯಲ್ಲಿ ಅವಳಿಗೆ ತನ್ನ ನಗುಮೊಗ ಕಾಣದಿರಲಿಲ್ಲ!

ಎರಡು ಮನಗಳೊಂದಿಗೆ ಆತ್ಮಗಳೂ ಒಂದಾದುವು.

ಕಿಟಕಿಯಲ್ಲಿಂದ ತಂಗಾಳಿ ತೇಲಿ ಬರುತ್ತಲಿತ್ತು; ಆಕಾಶ ನಿರಭ್ರವಾಗಿದ್ದಿತು; ತಿಂಗಳು ಮೆಲ್ಲಗೆ ಮಲ್ಲಿಗೆನಗೆ ಬೀರುತ್ತಲಿದ್ದ!

# ರಂಗನ ಮಂಗತನ

(ಅನುಭವ ಚಿತ್ರವೊಂದು.)

ಗೆಳೆಯ ರಂಗನೊಂದಿಗೆ ಸಾಯಂಕಾಲ ತುಸು ಅಡ್ಡಾಡಿ ಬರಬೇಕೆಂದು ಹೋಗಿದ್ದೆ. ಇಬ್ಬರೂ ಏನೋ ಹರಟೆ ಹೊಡೆಯುತ್ತ ನಡೆದಿದ್ದೆವು. ರಂಗ ಒಮ್ಮೆಲೇ ತಡೆದ, "ನೋಡೋ ಅಲ್ಲಿ, ಅವಳು ಹೇಗೆ 'ಮುರುಕ' ಮಾಡತಾ ಬರ್ತಾಳೆ!" ಎಂದು ನಮಗೆ ಸ್ವಲ್ಪ ದೂರದಲ್ಲಿ ಹೋಗುತ್ತಿದ್ದ ತರುಣಿಯೋರ್ವಳನ್ನು ತೋರಿಸುತ್ತಾ ನುಡಿದ. ಸುಮಾರು ಇಪ್ಪತ್ತು ವರ್ಷದ ತರುಣಿಯೊಬ್ಬಳು ನಾಲ್ಕು ಹೆಜ್ಜೆ ನಡೆಯುವುದು ಹಿಂತಿರುಗಿ ನೋಡುವುದು, ಮತ್ತೆರಡು ಹೆಜ್ಜೆ ನಡೆಯುವುದು ಇನ್ನೊಮ್ಮೆ ಹಿಂತಿರುಗಿ ನೋಡುವದು, ಒಂದರೆ ನಿಮಿಷ ಅಲ್ಲಿಯೇ ಯಾರಿಗಾಗಿಯೋ ದಾರಿಕಾಯುತ್ತ ನಿಲ್ಲುವುದು, ಈ ಪ್ರಕಾರ ಬರುತ್ತಿದ್ದಳು.

“ಅಯ್ಯೋ ಯಾರಿಗಾಗಿಯೋ ಕಾಯುತ್ತಿದ್ದಾಳೆ ಪಾಪ! ಆ ಪ್ರಾಣಿ ಬೇಗ ಬರಲೊಲ್ಲನಲ್ಲ! ಒಂದು ವೇಳೆ ನಾನಾಗಿದ್ದರೆ ಹೀಗೆ ಕಾಯಿಸುತ್ತಿರಲಿಲ್ಲ.” ಎಂದ ಮತ್ತೆ.

ನನಗೆ ಅದೇಕೋ ಅವನ ಮಾತು ಅಸಹ್ಯವೆನಿಸಿತು. “ಸಾಕು ಮಾಡೋ ನಿನ್ನ ಮಂಗತನ. ನಿನಗೆ ಯಾವಾಗಲೂ ಅಂಥ ಕೀಳು ವಿಚಾರವೇ ಯಾಕೆ? ತನ್ನ ಅಕ್ಕ-ತಮ್ಮ-ಅಣ್ಣ-ತಾಯಿ-ತಂದೆ ಯಾರಿಗಾದರೂ ಒಬ್ಬರಿಗಾಗಿ ಕಾಯುತ್ತಿರಬಹುದು.”

“ಮತ್ತೆ ನಾನಾದರೂ ಏನೆಂದೆ? ನೀನೇ ಏನಾದರೂ ತಿಳಿದುಕೊಂಡೀಯಲ್ಲ!” ಪುನಃ ನನ್ನ ಮೇಲೆಯೇ ಅವನ ಕೊಂಕುಮಾತು!

ನಾವು ಹಾಗೇ ಮುನ್ನಡೆದೆವು. ತುಸು ದೂರ ಹೋಗುವಷ್ಟರಲ್ಲಿ ಯಾರೋ ಒಬ್ಬ ಹಳೆಯ ಗೆಳೆಯ ಭೆಟ್ಟಿಯಾದ. ದಾರಿಯಲ್ಲಿಯೇ ಸುಮಾರು ೮-೧೦ ನಿಮಿಷ ಮಾತನಾಡುತ್ತ ನಿಂತಿದ್ದೆವು.

“ಕಾ ಕಾ ಽ” ಆರ್ತಸ್ವರವೊಂದು ಒಮ್ಮೆಲೇ ನಮ್ಮನ್ನು ಹಿಂತಿರುಗಿ ನೋಡಿಸಿತು. ಮುಪ್ಪಿನ ಕಡೇ ಮೆಟ್ಟಿಲಲ್ಲಿದ್ದ ಒಬ್ಬ ಮನುಷ್ಯ ಬರುತ್ತಲಿದ್ದ. ಎದುರಿನಿಂದ ಒಂದು ಕುದುರೆ ಗಾಡಿ ಬಂದಿತು. ಅವನ ಮೈಮೇಲೆ ಹಾಯ್ದೀತೆಂದು ತರುಣಿಯೋರ್ವಳು ಕಿರುಚಿಕೊಂಡಿದ್ದಳು. ಗಾಡಿಯವ ಕುದುರೆಯನ್ನು ನಿಲ್ಲಿಸಿದ. ಅವಳು ಮುದುಕನನ್ನು ದಾರಿಯ ಪಕ್ಕಕ್ಕೆ ಕರೆದೊಯ್ದಳು. ಗಾಡಿ ಹೊರಟು ಹೋಯಿತು.

ಆಕೆಯನ್ನು ನೋಡಿದೆ. ಅವಳೇ! ನಾವು ಹದಿನೈದು ನಿಮಿಷ ಮೊದಲು ಕಂಡಾಗ ಯಾರಿಗಾಗಿಯೋ ದಾರಿ ಕಾಯುತ್ತ ಬರುತ್ತಲಿದ್ದ ತರುಣಿ!

“ರಂಗ್ಯಾ, ನೋಡಲ್ಲಿ. ಅವಳು ಯಾರಿಗಾಗಿ ದಾರಿ ಕಾಯುತ್ತಿದ್ದಳೆಂಬುದು ತಿಳಿಯಿತೇ? ಬಹಳೇ ಉತ್ಸುಕನಾಗಿದ್ದೆಯಲ್ಲ!” ನಾನೆಂದೆ.

ನನ್ನ ಮಾತುಗಳು ನಮ್ಮ ಹಳೆಯ ಗೆಳೆಯನಿಗೆ ಅರ್ಥವಾಗದಿದ್ದರೂ, ರಂಗನ ಎದೆಯಲ್ಲಿ ಅವು ಹದನವಾದ ಬಾಣಗಳಂತೆ ನಟ್ಟಿರಬಹುದೆಂದು, ಅವನ ಕಪ್ಪಿಟ್ಟು-ಕಳೆಗುಂದಿದ ಮುಖವೇ ಸಾರಿ ಹೇಳುವಂತಿದ್ದಿತು. !!



# ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮ

**ಸುಧಾರಿಸಿದ ೨ನೇಯ ಆವೃತ್ತಿ ಬೆಲೆ ೧-೮-೦**

ಪ್ರತಿಯೊಬ್ಬ ಬ್ರಹ್ಮಚಾರಿಯೂ, ಗೃಹಸ್ಥಾಶ್ರಮಿಯೂ ಅವಶ್ಯವಾಗಿ
ಓದಲೇಬೇಕಾದ ಪುಸ್ತಕ. **ಏಕೆ ಕೇಳುವಿರಾ ?**

೧ ವಿವಾಹಿತ ಸ್ತ್ರೀ ಪುರುಷರು ಬ್ರಹ್ಮಚರ್ಯವನ್ನು ಯಾಕೆ ಮತ್ತು ಹೇಗೆ ಆಚರಿಸಬೇಕು ?

೨ ವಿವಾಹದ ಪೂರ್ವದಲ್ಲಿಯೂ ವಿವಾಹದ ನಂತರವೂ ಹೇಗೆ ವರ್ತಿಸಬೇಕು ?

೩ ನಿಜವಾದ ಸಂಸಾರ ಸುಖವೆಂದರೇನು ? ಅದನ್ನು ಹೇಗೆ ಅನು ಭೋಗಿಸಬೇಕು ?

೪ ವಿವಾಹ ಮಾಡಿಕೊಳ್ಳ ಬಯಸುವವರು ತಕ್ಕ ವಧೂವರರನ್ನು ಹೇಗೆ ಆರಿಸಬೇಕು ?

೫ ಕೆಟ್ಟ ಚಟಗಳು ಹೇಗೆ ತಗಲುವವು ?

೬ ಸಂತಾನ ಸಂಯಮನವನ್ನು ಯಾರು ಮತ್ತು ಹೇಗೆ ಪಾಲಿಸಬೇಕು?

೭ ಸ್ತ್ರೀ ಪುರುಷರ ಜಾತಿ ಲಕ್ಷಣ.

೮ ಕಾಮಶಾಸ್ತ್ರ.

೯ ಸಂತತಿ ಆಗುವ ಉಪಾಯ.

೧೦ ಉಪಯುಕ್ತ ಮತ್ತು ಸುಲಭವಾದ ಔಷಧಗಳು. ಇವುಗಳ ಹೊರ್ತಾಗಿ ಅನೇಕ ಜಟಿಲ ಸಮಸ್ಯೆಗಳಿಗೆ ಉತ್ತರಗಳಿವೆ.

ಪುಸ್ತಕ ಬೇಕಾದವರು ತೀವ್ರವಾಗಿ ಈಗಲೇ ಈ ಕೆಳಗಿನ ವಿಳಾಸಕ್ಕೆ ಬರೆದು ತರಿಸಿಕೊಳ್ಳಬೇಕು. ಪ್ರತಿಗಳು ಕಡಿಮೆ ಇರುವ ಕಾರಣ ಹಿಂದಿನಂತೆ ದೊರೆಯಲಾರದೆ ಹೋಗಬಹುದು.

ಮರಾಠಿಯಲ್ಲಿ ಇದೇ ಪುಸ್ತಕದ ಹತ್ತು ಆವೃತ್ತಿಗಳಾಗಿ ಒಂದೂ ಪ್ರತಿ ಉಳಿಯದಂತೆ ಮಾರಾಟವಾಗಿವೆ ! ಇದರಿಂದ ಈ ಪುಸ್ತಕದ ಉಪಯುಕ್ತತೆಯ ಮತ್ತು ಮಹತ್ವದ ಕಲ್ಪನೆಯಾಗಬಹುದಲ್ಲವೇ ? ಕನ್ನಡಿಗರೂ ಇದರ ಸಂಪೂರ್ಣ ಲಾಭ ಮಾಡಿಕೊಳ್ಳುವದು ವಿಹಿತವಲ್ಲವೇ ?

**ಅಜಿತ ಏಜನ್ಸಿ, ಬೆಳಗಾವಿ.**

# ವೀರಭಾರತ ಗ್ರಂಥಮಾಲೆ, ಬೆಳಗಾವಿ.

**ವಿಷಯಗಳ ವಿಪುಲತೆ ! ರಸಿಕರಿಗೆ ರಸದೂಟ !!**

ವರುಷದಲ್ಲಿ ಆರು ಉತ್ತಮ ಗ್ರಂಥಗಳು :
ವಾರ್ಷಿಕ ವರ್ಗಣಿ ಕೇವಲ ೨ ರೂ. ೪ ಆಣೆ.
ಇದೀಗ ಪ್ರಕಟವಾಗಿವೆ.

೧) **ಜನೆವರಿ ೨೬** ಲೇ. ಶ್ರೀಕೃಷ್ಣ ಪಾಟೀಲ.
ಉಜ್ವಲ ದೇಶಾಭಿಮಾನದ ನಾಟಕ. ಬೆಲೆ: ೦-೫-೦

೨) **ವಿಜಯಶ್ರೀ** ಲೇ. ಶ್ರೀ. ಮಿರ್ಜಿ ಅಣ್ಣಾರಾಯರು.
ವಾಸ್ತವ ಪ್ರಪಂಚದ ಸತ್ಯಸಂಗತಿಗಳ ಸುಂದರವಾದ ಕತೆಗಳ
ಸಂಕಲನ. ಬೆಲೆ ೧-೦-೦

೩) **ಹಂಬಲ** ಶ್ರೀ. ಬೆಟಗೇರಿ ಕೃಷ್ಣಶರ್ಮರ ಮುನ್ನುಡಿಯೊಂದಿಗೆ
ಲೇ — **ಶ್ರೀ. ಕೃಷ್ಣಮೂರ್ತಿ ಕಿತ್ತೂರ, ಬೆಳಗಾವಿ.**
ನಗುವ, ಅಳುವ, ಮರಗುವ, ಮನಕೊರೆಯುವ ಸನ್ನಿವೇಶಗಳ
ಉತ್ತಮ ಕತೆಗಳು. ಬೆಲೆ ೧-೦-೦

೪) **ಕಾಂಗ್ರೆಸದ ಇತಿಹಾಸ ಅಚ್ಚಿನಲ್ಲಿ** ದೇ. ಭ. ಗಂಗಾಧರರಾವ
ದೇಶಪಾಂಡೆ ಇವರ ಮುನ್ನುಡಿಯೊಂದಿಗೆ.
ಲೇ. **ಶ್ರೀ. ಭಾ. ವಿ. ಗೋಗಟೆ.** ೦-೧೦-೦

೫) **ಮಹಾತ್ಮಾ ಗಾಂಧಿಯವರ ಕೊಲೆ** ಬೆಲೆ: ೦-೮-೦

೬) ? ? ?

ಎಲ್ಲರೂ ಓದಲೇ ಬೇಕಾದ ಪುಸ್ತಕಗಳು.

— X —

ಕೇವಲ ೨ ರೂ. ೪ ಆ. ಕಳಿಸಿ ಇಂದೇ ಚಂದಾದಾರರಾಗಿರಿ.
ಪ್ರಕಟವಾದ ಪುಸ್ತಕಗಳು ನಿಮಗೆ **ನಾಳೆಯೇ** ಓದಲು ದೊರೆಯು
ವವು. ಉಳಿದವುಗಳು ಬೇಗನೇ ನಿಮ್ಮ ಕೈಸೇರುವವು.

ಬರೆಯಿರಿ :— **ಅಜಿತ ಏಜನ್ಸಿ ಟಿಳಕ ಚೌಕ, ಬೆಳಗಾವಿ.**